ನವರಾಜ್ಯೋದಯ ಪ್ರಕಟಣೆ

# ವಿಜಯದುಂದುಭಿ

(ಕವನಸಂಕಲನ)

ಸಂಪಾದಕರು :

ಬಿ. ಎ. ಸನದಿ



ಪ್ರಕಾಶಕರು :

ಚೇತನ ಪ್ರಕಾಶನ, ಬೆಳಗಾವಿ

೧೯೫೬

ಕ. ಪ. 117

ಶ್ರೀ. ಅಮ್ಮೆಂಬಳ ಶಂಕರನಾರಾಯಣ

ಅವರಿಗೆ

ಜ್ಞಾನ ಪಂಚಮಿಯ ನೆನಪಿಗಾಗಿ.

ಬಿ.ಎ. ಸನದಿ

ಧಾರವಾಡ

೯-೫-೫೭

# ವಿಜಯದುಂದುಬಿ

(ಕವನಸಂಕಲನ)

ಸಂಪಾದಕರು :

ಬಿ. ಎ. ಸನದಿ



ಚೇತನ ಪ್ರಕಾಶನ, ಬೆಳಗಾವಿ

೧-೧೧-'೫೬ ]  [ ೦-೧೨-೦

# " ವಿಜಯದುಂದುಭಿ "



ಸಲಹಾ ಸಮಿತಿ :

ಶ್ರೀ. ಬಸವರಾಜ ಕಟ್ಟೀಮನಿ
ಶ್ರೀ. ಕೃಷ್ಣಮೂರ್ತಿ ಪುರಾಣಿಕ
ಶ್ರೀ. ಮಿರ್ಜಿ ಅಣ್ಣಾರಾಯರು
ಶ್ರೀ. ಈಶ್ವರ ಸಣಕಲ್ಲ

ಪ್ರಥಮ ಮುದ್ರಣ : ಅಕ್ಟೋಬರ, ೧೯೫೬
೧,೦೦೦ ಪ್ರತಿಗಳು


ಮುದ್ರಕರು :-
ಡಿ. ಎಸ್. ಕಬಾಡಗಿ,
ಮ್ಯಾನೇಜರ,
ದಿ ವಿಶ್ವಭಾರತ ಪ್ರಿಂ. ಮತ್ತು ಪ. ಕಂ.
ಲಿ., ಬೆಳಗಾವಿ.

ಪ್ರಕಾಶಕರು :-
ಎಸ್. ಡಿ. ಇಂಚಲ,
ಚೇತನ ಪ್ರಕಾಶನ, ಜಾಲಗಾರ ಬೀದಿ,
ಬೆಳಗಾವಿ.

# ಸಮರ್ಪಣೆ

ಎಂದಿನಿಂದಲೂ ನಮ್ಮವರಾಗಿದ್ದು

**ನಮ್ಮ ನಾಡ ನವೋದಯವಾಗುವ ಹೊತ್ತಿನಲ್ಲಿಯೇ**

ತಾಯಿ ನೆಲಕ್ಕೆ ಹೊರತಾಗಿ

**ವ್ಯಾಕುಲಚಿತ್ತರಾಗಿರುವ**

**ಕನ್ನಡ ಸೋದರ-ಸೋದರಿಯರಿಗೆ**

**ಸಹಾನುಭೂತಿಪೂರ್ವಕವಾಗಿ.**

## ಹಚ್ಚೇವು ಕನ್ನಡದ ದೀಪ !

" ಬಹುದಿನಗಳಿಂದ ಮೈಮರವೆಯಿಂದ
ಕೂಡಿರುವ ಕೊಳೆಯ ಕೊಚ್ಚೇವು
ಎಲ್ಲೆಲ್ಲಿ ಕನ್ನಡದ ಕಂಪು ಸೂಸ-
ಲಲ್ಲಲ್ಲಿ ಕರಣ ಚಾಚೇವು.
ನಡು ನಾಡೆ ಇರಲಿ ಗಡಿನಾಡೆ ಇರಲಿ
ಕನ್ನಡದ ಕಳೆಯ ಕೆಚ್ಚೇವು.
ಮರತೇವು ಮರವ ತೆರೆದೇವು ಮನವ ಎರೆದೇವು ಒಲವ-ಹಿಡಿ ನೆನಪ;
ನರನರವನೆಲ್ಲ ಹುರಿಗೊಳಿಸಿ ಹೊಸೆದು ಹಚ್ಚೇವು ಕನ್ನಡದ ದೀಪ ! "

—ಡಾ. ಡಿ. ಎಸ್. ಕರ್ಕಿ

( 'ನಕ್ಷತ್ರಗಾನ'ದಿಂದ )

# ಕೋಟೆಯ ಬಾಗಿಲಲ್ಲಿ

ಭಾರತ ಸ್ವಾತಂತ್ರ್ಯದ ಮಹಾ ಸಂಗ್ರಾಮದ ರುದ್ರಭೂಮಿಯಲ್ಲಿ ಕೆಚ್ಚಿನಿಂದ ಕಾರ್ಯಮಾಡಿ ಕ್ರಾಂತಿಯನ್ನೆಬ್ಬಿಸಿದ ಬೆಳಗಾಂವಿ ಜಿಲ್ಹೆಯು ತನ್ನವರು ಸಲ್ಲಿಸಿದ ತ್ಯಾಗಸೇವೆಗಳಿಂದ, ಆಗಾಗ ಅರ್ಪಿಸಿದ ಬಲಿದಾನಗಳಿಂಡ ರಾಷ್ಟ್ರಸೇವಾರಂಗದಲ್ಲಿ ಶ್ರೇಷ್ಠವಾದ, ಸತ್ವಯುತವಾದ, ನಾಯಕಪಾತ್ರ ವನ್ನಾಡಿ ಕನ್ನಡಿಗರಿಗೆ ಕೀರ್ತಿಯ ಕೇತನವಾಗಿ ಮೆರೆದಿದೆ. ಬೆಳಗಾಂವಿಯ ನಾಡು ಜಾಗ್ರತ ಚೇತನವನ್ನು ರಕ್ತಗತ ಮಾಡಿಕೊಂಡು, ಕನ್ನಡಿಗರ ಸಾಹಸಕೇತನವಾಗಿ, ಕನ್ನಡನಾಢಿನ ಆತ್ಮಪುರುಷನ ದಿವ್ಯ ಮೂರ್ತಿಯನ್ನು ರೂಪಿಸುವ ಮಹತ್ಕಾರ್ಯದಲ್ಲಿ ತನ್ನ ಪಾಲಿನ ಪವಿತ್ರ ಕರ್ತವ್ಯವನ್ನು ಕೃತಿಗಿಳಿಸಿದೆ. ಈ ಜಿಲ್ಹೆಯ ಸವಿಗಣ್ಣಾದ ಬೆಳಗಾಂವಿ ನಗರವು ಉತ್ತರ ಕನ್ನಡದ ಬೆಳಕಾಗಿ, ಕ್ರಾಂತಿಯ ಕಿಡಿಯಾಗಿ, ಪ್ರಗತಿಯ ಪ್ರತೀಕವಾಗಿ, ಶಿಕ್ಷಣ ಪ್ರಸಾರದ ಜ್ಞಾನಜ್ಯೋತಿಯನ್ನು ಶಿರದಲ್ಲಿ ಧರಿಸಿದ ದೀಪಸ್ತಂಭ ವಾಗಿ, ಗಂಭೀರವಾಗಿ ಬೆಳೆದು ನಿಂತಿದೆ.

ಸಹ್ಯಾದ್ರಿಯ ಸುಂದರವಾದ ಪರ್ವತ ಶ್ರೇಣಿಗಳಡಿಯಲ್ಲಿ ನಿಸರ್ಗ ಸೌಂದರ್ಯವು ತನ್ನ ಚೆಲುವನ್ನು ಚಿಮುಕಿಸಿದ, ನಾನಾಬಗೆಯಾದ ನಿಬಿಡ ವಾದ ತರುರಾಜಿಯಲ್ಲಿ ನಡುನಡುವೆ ತಲೆಯೆತ್ತಿ ನೋಡುತ್ತಿರುವ ಬೆಳಗಾಂವಿ ನಗರವು ನೋಟಕರ ಮನವನ್ನು ಸೆರೆಹಿಡಿಯುವಲ್ಲಿ ಸಂದೇಹವಿಲ್ಲ. ಬೆಳಗಾಂವಿಯ ಈ ಚೆಲುವು, ಈ ಕೆಚ್ಚು, ಈ ನೆಚ್ಚು ಲೀಲಾಜಾಲವಾಗಿ ಜಾಗ್ರತವಾಗಿದೆ. ಅದೆಂತು? ಎಂಬ ಉಸಿರಿನೊಂದಿಗೆ ಉತ್ತರವು ಸಿದ್ಧ ವಾಗಿಯೇ ಇದೆ....

ಕನ್ನಡ ನಾಡಿನ ಸ್ವಾತಂತ್ರ್ಯ ಸಂಗ್ರಾಮದಲ್ಲಿ, ಬ್ರಿಟಿಷ ಸಾಮ್ರಾಜ್ಯ ಶಾಹಿಯ ಕ್ರೂರ ದಬ್ಬಾಳಿಕೆಯ ದವಡಿಯಲ್ಲಿದ್ದ, ಕಿತ್ತೂರ ಸಂಸ್ಥಾನದ ಸ್ವಾತಂತ್ರ್ಯ ರಕ್ಷಣೆಗಾಗಿ ಕೆಚ್ಚೆದೆಯಿಂದ ಹೋರಾಡಿ ಆತ್ಮ ಬಲಿದಾನಕ್ಕೂ ಸಿದ್ಧಳಾಗಿ, ಮಿಂಚಿದ ಮಹಿಳೆ ವೀರರಾಣಿ ಕಿತ್ತೂರ ಚೆನ್ನಮ್ಮಾಜಿಯ ಗಂಡುಮೆಟ್ಟಿನ ತಾಯ್ನಾಡು ಈ ಬೆಳಗಾಂವಿ ಜಿಲ್ಲೆ. ಕನ್ನಡಿಗರ ಇತಿಹಾಸ ದಲ್ಲಿ ವೀರಪರಂಪರೆಯನ್ನು ಕಾಯ್ದು, ಮರಾಠರ ಮುಖಂಡನನ್ನೂ

ಕೆಲಕಾಲ ತಡೆಗಟ್ಟಿ ತನ್ನ ಕ್ಷಾತ್ರತೇಜವನ್ನು ಬೆಳಗಿ ಹೋದ ಬೆಳವಡಿ ಮಲ್ಲಮ್ಮಾಜಿಯ ಹೆಮ್ಮೆಯ ನಾಡು ಈ ಬೆಳಗಾಂವಿ ಜಿಲ್ಲೆ. ಕೆಳಗಿಳಿಸಲ್ಪಟ್ಟ ಕಿತ್ತೂರ ಬಾವುಟವನ್ನು ಕೋಟೆಯ ಮೇಲೇರಿಸಿ ಕನ್ನಡ ಕೀರ್ತಿಯನ್ನು ಮತ್ತೊಮ್ಮೆ ಮೆರೆಯಲೆಂದು ಕ್ರಾಂತಿಯ ಕಹಳೆಯನ್ನೂದಿ ಪ್ರತಿಭಟಿಸಿದ ಪ್ರಚಂಡ ಪರಾಕ್ರಮಿಯಾದ ಸಂಗೊಳ್ಳಿ ರಾಯಣ್ಣನು ಮಾಡಿ ಮಡಿದ ಮರೆಯದ ನಾಡಾದ ನಂದಗಡವು ಈ ಬೆಳಗಾಂವಿ ಜಿಲ್ಲೆ! ೧೯೪೨ರ ರಾಷ್ಟ್ರೀಯ ಅಂದೋಲನದಲ್ಲಿ ಕ್ರಾಂತಿಯನ್ನೆತ್ತಿ ಸಿಡಿದೆದ್ದ ಕ್ರಾಂತಿವೀರರನ್ನೂ, ಹುತಾತ್ಮರನ್ನೂ ಹೆತ್ತ ನಾಡು ಬೆಳಗಾಂವಿ ಜಿಲ್ಲೆ !

ನಿಸರ್ಗದತ್ತವಾದ ಫಲದ್ರೂಪವಾದ ನೆಲಜಲಗಳನ್ನು ಪಡೆದು ಕಾಳಿನ ಕಣಜವೆಂದು ಖ್ಯಾತಿವೆತ್ತ ಎಂದೂ ಕುಂದದ ಸುಂದರವಾದ ಕುಂದರ ನಾಡು ಈ ಬೆಳಗಾಂವಿ ಜಿಲ್ಲೆ. ವಾಗ್ದೇವಿಯ ಭಾಂಡಾರವನ್ನೊಡೆದು ಕನ್ನಡ ಸರಸ್ವತಿಯ ಸಾರವತ್ತಾದ ಕೋಶಾಗಾರವನ್ನೇ ಸೂರೆಗೊಳ್ಳಲೆಂದು, ವೀರರಸ ಪ್ರಧಾನವಾದ 'ಗದಾಯುದ್ಧ' ಬರೆದು ಕಾವ್ಯದೇವಿಗೆ ರತ್ನಕಂಕಣವನ್ನಿಡಿಸಿದ ರತ್ನತ್ರಯರಲ್ಲೊಬ್ಬನಾದ, ಕವಿಸಾರ್ವಭೌಮನಾದ ಕವಿರನ್ನನನ್ನು ಹೆತ್ತು ತೊಟ್ಟಿಲಲ್ಲಿ ತೂಗಿದ ಮುದುವೊಳಲನ್ನು ( ಮುಧೋಳ ) ಒಮ್ಮೆ ಮಡಿಲಲ್ಲಿಟ್ಟುಕೊಂಡಿದ್ದ ರಸಿಕರ ನಾಡು ಬೆಳಗಾಂವಿ ಜಿಲ್ಲೆ! ಹೀಗೆ ನಿಸರ್ಗ ಸೌಂದರ್ಯದಿಂದ, ಕೋಟೆಕೊತ್ತಳಗಳಿಂದ, ಕ್ಷಾತ್ರತೇಜಸ್ಸನ್ನು ಮೆರದ ಹಲವಾರು ಸಂದರ್ಭಗಳ ವೀರ ಸ್ಮರಣೆಗಳಿಂದ ಮುನ್ನಡೆದು, ಹೋಳಾಗಿ ಹೋದ ಕರ್ನಾಟಕವನ್ನು ಒಂದುಗೂಡಿಸಲು ಏಕೈಕವಾಗಿದ್ದ ಏಕೀಕರಣ ಸಂಘವು ಮೊಟ್ಟಮೊದಲು ಅಂದರೆ ೧೯೨೪ ರಲ್ಲಿ ಜನ್ಮವೆತ್ತಿದ್ದು ಬೆಳಗಾಂವಿಯಲ್ಲಿ. ೧೯೨೪ ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸಿನ ಅಖಿಲ ಭಾರತ ಮಹಾ ಅಧಿವೇಶನವನ್ನು ಸೇರಿಸಿ, ರಾಷ್ಟ್ರಪಿತ ಗಾಂಧೀಜಿಯವರನ್ನೇ ನಾಯಕತ್ವದಲ್ಲಿರಿಸಿಕೊಂಡು, ನಾಡಿಗೆ ಹೊಸ ಚೇತನವನ್ನು ನೀಡಿದ ನಾಡು ಬೆಳಗಾಂವಿ. ಕನ್ನಡಿಗರ ಸಾಹಿತ್ಯ–ಸಂಸ್ಕೃತಿಗಳ ರಕ್ಷಣೆಗೆ ಉತ್ತರದ ಗಡಿಯಲ್ಲಿ ಉಕ್ಕಿನ ಕೋಟೆಯಂತಿದ್ದು, ತನ್ನ ಗರುಡ ಕಣ್ಣಿನ ಸರ್ಪಗಾವಲದಲ್ಲಿ ಕನ್ನಡ ದೇವಿಯ ಸ್ಥಾನಮಾನಗಳನ್ನು ಉಳಿಸಿಕೊಂಡು ಬರುತ್ತಿರುವ ಗಂಡೆದೆಯವರ ಕೆಚ್ಚಿನ ನಾಡು ಬೆಳಗಾಂವಿ !

ಐತಿಹಾಸಿಕವಾಗಿ ಇಷ್ಟೊಂದು ಮಹತ್ತರವಾದ ಪಾತ್ರವನ್ನಾಡಿದ ಬೆಳಗಾಂವಿಯು ಕಳೆದ ಒಂದೆರಡು ಶತಮಾನಗಳಲ್ಲಿ ನೆರೆಪ್ರಾಂತದವರ ಅದೆಷ್ಟೋ ದಬ್ಬಾಳಿಕೆಗಳನ್ನು ತಾಳ್ಮೆಯಿಂದ, ಸಂಯಮದಿಂದ ಸಹಿಸುತ್ತ ಬಂದು ಇದೀಗ ತನ್ನ ಅಸ್ತಿವಾರವನ್ನು ಭದ್ರಗೊಳಿಸಿಕೊಂಡು ಕನ್ನಡಕ್ಕೆ ಕಳಸಪ್ರಾಯವಾಗಿದೆಯೆಂದರೆ ಅತಿಶಯೋಕ್ತಿಯಲ್ಲ. ಕರ್ನಾಟಕದ ಉತ್ತರದ ಹೆಬ್ಬಾಗಿಲವಾದ ಬೆಳಗಾಂವಿ ನಗರದ ಮತ್ತು ಬೆಳಗಾಂವಿ ಜಿಲ್ಲೆಯ ಈ ಇತಿಹಾಸವು ರೋಮಾಂಚಕಾರಿಯಾಗಿದೆ; ಚಿರಸ್ಮರಣೀಯವಾಗಿದೆ; ಸ್ಫೂರ್ತಿಯ ಕೇಂದ್ರವಾಗಿದೆ.

ನವ ಕರ್ನಾಟಕದ ಭಾಗ್ಯೋದಯವು ಮೊದಲಾಗುತ್ತಿದ್ದ ಇಂದಿನ ಪರ್ವಕಾಲದಲ್ಲಿ ಗಡಿನಾಡಿನ ಸಮಸ್ಯೆಗಳನ್ನು ಸ್ವಾನುಭವದಿಂದ ತಿಳಿದು ಕೊಂಡು, ಜನತೆಯ ಪ್ರಾತಿನಿಧಿಕ ಅಭಿಪ್ರಾಯಗಳನ್ನೂ, ಆಶೋತ್ತರ ಗಳನ್ನೂ, ಹುರುಪು ಹುಮ್ಮಸ್ಸುಗಳನ್ನೂ, ನಾಡ ಹೋರಾಟದ ಸವಿನೆನಹು ಗಳನ್ನೂ ಕುರಿತು ವಿಚಾರಿಸಿ ವಿವೇಚಿಸಿ ವ್ಯಕ್ತಪಡಿಸುವದಕ್ಕೆ ಇದು ಸುವರ್ಣ ಸಮಯವೆಂದು ಬೇರೆ ಹೇಳಬೇಕಾಗಿಲ್ಲ. ಅಂಥ ಒಂದು ಅಲ್ಪವಾದರೂ ಆತ್ಮೀಯವಾದ ಕಾರ್ಯವನ್ನು– ಈ ಜಿಲ್ಲೆಯ ಸದ್ಯದ ಹಿರಿ-ಕಿರಿಯ ಕವಿಗಳ ಕಾವ್ಯಕಿನ್ನರಿಯನ್ನು ಮಿಡಿಯಿಸಿ, ಅಂಥ ಕವನಗಳನ್ನು ಕಲೆಹಾಕಿ, ಒಂದು ಸಂಕಲನವನ್ನು–ಕನ್ನಡಿಗರ ಕೈಗೆ ಕೊಡಬೇಕೆಂಬ ವಿಚಾರವು ನನ್ನ ಮಿತ್ರರಾದ ಶ್ರೀ. ಸನದಿಯವರಲ್ಲಿ ಮೂಡಿದಾಗ ಅದು ನನಗೂ ಒಪ್ಪಿಗೆಯಾಗಿ ಈ ಕೆಲಸ ಪ್ರಾರಂಭವಾಯಿತು. ಅಲ್ಲದೆ, ಕರ್ನಾಟಕದ ನವ ದರ್ಶನವನ್ನು ಜಾಗೃತ ಜನಪದವಾದ ಬೆಳಗಾಂವಿಯ ಕಣ್ಣಿನಿಂದ ಕಂಡು, ಅದನ್ನೇ ಉಳಿದ ಬಂಧು ಮಿತ್ರರಿಗೆ ಕಾಣಿಸಿಕೊಡುವ ಯತ್ನವನ್ನು ಈ ಚಿಕ್ಕ ಹೊತ್ತಿಗೆಯಲ್ಲಿ ಮಾಡಲಾಗಿದೆ.

ಈ ಒಂದು ಹಂಬಲದ ಧ್ವನಿಯೇ ಈ 'ವಿಜಯದುಂದುಭಿ' ಯಾಗಿ ಕನ್ನಡದ ಬಾಂದಳದಲ್ಲಿ ಮೊಳಗುತ್ತಿದೆ. ಈ ಮೊಳಗಿನಲ್ಲಿ ಸಾವಿರಸಾವಿರ ಸ್ವರಗಳ ಸುಂದರ ಸಮ್ಮಿಲನವು ಜನಜೀವನದ ತೂರ್ಯವಾಣಿಯಾಗಿ ತೂರಿತೂರಿ ಬರುತ್ತಿರುವದನ್ನು ಸಹೃದಯರು ಕಿವಿಯಾರೆ ಕೇಳಬಹುದು. ನಮ್ಮ ಜಿಲ್ಲೆಯ ಎಳೆಯರ ಬೆಳವಿಗೆಯಲ್ಲಿ ಬರಲಿರುವ ನಾಡಿನ ನಾಡಿಗರ

ಸ್ಪಂಧನವನ್ನು ಅನುಭವಿಸಬಯಸುವ ನಾಡೋಜರಿಗೆ ಇದೊಂದು ಉತ್ತಮ ಸಾಧನವೆಂದು ಹೇಳಬಯಸುವೆ. ತಾವು ಅನುಭಸಿದ ವಿರೋತ್ಸಾಹ ಗಳನ್ನೂ ಆದರ್ಶಗಳನ್ನೂ ತಾವು ಕಂಡಂತೆ, ತಮ್ಮದೇ ಆದ ರೀತಿಯಲ್ಲಿ ವ್ಯಕ್ತಪಡಿಸಲು ಒಂದು ಪ್ರಾಮಾಣಿಕವಾದ ಯತ್ನವು ಈ ಕವನಗಳಲ್ಲಿ ನಡೆದಿದೆಯೆಂದು ಹೇಳಬಹುದು. ಆದುದರಿಂದ ಸಹೃದಯರು ಅಭಿಮಾನ ದಿಂದ ಈ ಚಿಕ್ಕ ಸಂಗ್ರಹವನ್ನು ಪ್ರೋತ್ಸಾಹಿಸಬೇಕೆಂದು ವಿನಂತಿಸುತ್ತೇನೆ.

ಜಾಲಗಾರ ಬೀದಿ,
ಬೆಳಗಾವಿ.
೩೧–೧೦–೧೯೫೬.

ಎಸ್. ಡಿ. ಇಂಚಲ

# ವಿಜಯಮಂಟಪ

'ಕುರಿತೋದದೆಯುಂ ಕಾವ್ಯ ಪ್ರಯೋಗಪರಿಣತಮತಿಗಳ್'–ಎಂಬ ಅಭಿಮಾನದ ಅಭಿದಾನಕ್ಕೆ ಪಾತ್ರರಾಗಿರುವ ಕನ್ನಡರ ಕಾವ್ಯಜೀವನ ವೈಶಿಷ್ಟ್ಯಪೂರ್ಣವಾಗಿದೆ; ಸಂಪತ್‌ಭರಿತವಾಗಿದೆ. 'ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರಮಾದ ಮಾನಿಸರ' ಈ ಕನ್ನಡ ಸಂಸ್ಕೃತಿ ಹಿಮಶೈಲದೆತ್ತರವನ್ನು ಸಾಧಿಸಿದ್ದರೆ, ಕನ್ನಡ ಕಾವ್ಯದ ಕೃತು ಶಕ್ತಿ ತೇನಸಿಂಗನ ಸಾಹಸವೃತ್ತಿಯನ್ನು ಬೋಧಿಸುತ್ತ ಬಂದಿದೆ. ಕನ್ನಡಿಗರ 'ಕಲ್ಪನಾವಿಲಾಸವು ಭೃಂಗದ ಬೆನ್ನೇರಿ' ಗಾಳಿ ಹರಿಯುವುದಕ್ಕೂ ಹರಿದು ಬಂದಿದ್ದರೆ, ಅವರ 'ಜೀವನವನದಲ್ಲಿ ಕವನವು ಮಯೂರವಾಗಿ' ನರ್ತಿಸಿ ಜನಮನವನ್ನೂ ಕುಣಿಸಿದೆ; ತಣಿಸಿದೆ. ಅಂದಂದಿನ ಜೀವನಕ್ಕೆ ತಕ್ಕ ದರ್ಪಣವಾಗಿ ಬೆಳಗುತ್ತ ಬಂದಿರುವ ಕನ್ನಡಕಾವ್ಯವಿಂದು ಆಧುನಿಕ ಜೀವನದ ವಿಶ್ವಗತಿಯ ತಾಳಕ್ಕೆ ತನ್ನ ನವ್ಯಧ್ವನಿಯ ಮೇಳಗೂಡಿಸುತ್ತಿರುವುದು ಸ್ವಾಭಾವಿಕವೂ ಕನ್ನಡ ಕಾವ್ಯದ ಚಿರಂತನ ಚೇತನಕ್ಕೆ ಸಾಕ್ಷಿಯೂ ಆಗಿದೆಯೆಂದು ಹೇಳಬಹುದು. ಅದೊಂದು ಅಭಿಮಾನದ ಸಂಗತಿಯೂ ಅಹುದು.

ಆದರೂ, ನಮ್ಮ ಕಾವ್ಯ–ಕಲೆ–ಸಂಸ್ಕೃತಿಗಳ ಸಂವರ್ಧನೆಗೆ ನಮ್ಮದೆನ್ನುವ ನಾಡೊಂದಿರದೆ ಕನ್ನಡಿಗರು ಬಹುಪರಿಯಾದ ಕಷ್ಟ-ನಷ್ಟಗಳನ್ನು ಅನುಭವಿಸಬೇಕಾಯ್ತು–ಇಂದಿನವರೆಗೆ. ಕಳೆದ ಅರ್ಧಶತಮಾನದ ನಿರಂತರ ಹೋರಾಟದ ಫಲವಾಗಿ ಇಂದು ನಮ್ಮ ನಾಡು ಒಂದಾಗಿದೆ. ಈ ಸಿದ್ಧಿಯ ಸಾಧನೆಯಲ್ಲಿ, ಗಂಡು ಗಡಿನಾಡೆನಿಸಿರುವ ಬೆಳಗಾವಿ-ನಾಡು ಆಡಿರುವ ಮಹತ್ವದ ಪಾತ್ರವನ್ನು ಕುರಿತು ನಾಳಿನ ಇತಿಹಾಸಕಾರ ಬರೆದೇ ಬರೆಯುತ್ತಾನೆ. 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂದು ಮೊಟ್ಟ ಮೊದಲ ಬಾರಿಯಾಗಿ ೧೯೨೪ರಲ್ಲಿ ಉದ್ಘೋಷಿಸಿ ಇಡಿಯ ಭಾರತಕ್ಕೇನೇ ಕರ್ನಾಟಕ ದರ್ಶನ ಮಾಡಿಸಿ ಕೊಟ್ಟ ಶ್ರೇಯಸ್ಸು ಬೆಳಗಾವಿಯ ಪಾಲಿಗೆ ಮೀಸಲಾಗಿದೆ.

ಅಂತೆಯೇ, ಆ ಚಲುವಕನ್ನಡನಾಡು ಉದಯವಾಗುತ್ತಿಹ ಈ ಸುಪ್ರಭಾತದಲ್ಲಿ ಬೆಳಗಾವಿಯು ನೆಲಕ್ಕೂ ನವಿರೇಳುವಂತಾಗಿದೆ; ನಿಂತ ನೀರಿಗೂ ಹರಿಯುವ ಹೊಸ ಬಲ ಬಂದಿದೆ; ಕೋಟೆಯ ಕಲ್ಲುಬಂಡೆಗಳಿಗೂ ಬಾಯಿ ಬಂದಿದೆ; ಕನ್ನಡ ಜನಜಂಗುಳಿಯಂತೂ ನಾಡದೇವಿಯ ವಿಜಯಾಂಗಣದಲ್ಲಿ ಕಲೆತು ಮುಗಿಲು ಮುಟ್ಟುವಂತೆ ಜಯಘೋಷಗಳನ್ನು ಮಾಡುತ್ತಿದೆ. ನವ ಸ್ಫೂರ್ತಿಸಂಚಾರದ ಈ ನವೋದಯದ ಹೊತ್ತಿನಲ್ಲಿ ನಮ್ಮ ಕವಿಬಳಗ ಸುಮ್ಮನೆ ಕೂಡ್ರುವುದುಂಟೆ? ತಾವು ಕಂಡುಂಡ ಅನುಭವ-ಅನಿಸಿಕೆಗಳನ್ನು ಕುರಿತು ಅವರು ಹಾಡದಿರುವುದುಂಟೇ ? ಕೇವಲ ಹೊಟ್ಟೆಯ ಹೋರಾಟಕ್ಕೆಂದು ಬಂದು ನೆಲೆಸಿದ ನಮ್ಮ ನೆರೆಭಾಷಾಬಾಂಧವರು ಈ ನೆಲ ತಮ್ಮದೇ ಎಂದು ನಡೆಸಿದ ಹಾರಾಟ ಚೀರಾಟಗಳ ನಡುವೆಯೇ ಬೆಳಗಾವಿ ನಾಡಿನ ಸದ್ದಿಲ್ಲದ ಹೋರಾಟವು ಸಾಧಿಸಿದ ಸಾತ್ತ್ವಿಕ ವಿಜಯದ ಕುರಿತು ಅವರು ಆನಂದ ವ್ಯಕ್ತಪಡಿಸದಿರುವುದುಂಟೇ ? ಹಿಂದಿನ ಹಿರಿಯ ಕವಿಗಳು ಕಂಡ ನವಕರ್ನಾಟಕದ ಕನಸು ಇಂದು ನನಸಾಗುತ್ತಿರುವಾಗ, ಇಂದಿನ ತರುಣ ಕವಿಗಳು ನಾಳಿನ ನಾಡಿನ ಹೊಂಗನಸುಗಳನ್ನು ಕಟ್ಟಿ ಹಾಡದಿರುವುದುಂಟೆ?

ಈ ಎಲ್ಲ ಪ್ರಶ್ನೆಗಳ ಉತ್ತರರೂಪವಾಗಿಯೇ ಈ "ವಿಜಯದುಂದುಭಿ" ಕನ್ನಡಿಗರೆದುರು ಕಾಣಿಸಿಕೊಳ್ಳುತ್ತಿದೆ. ಬೆಳಗಾವಿ ನಾಡಿನ ಜನವಾಣಿಯ ಬೇರಿನಿಂದ ನೀರುಂಡ ಕವಿವಾಣಿಯ ಹೂವೊಂದು ನಾಡದೇವಿಯ ಅಡಿಗೆ ಈ ಮಹಾದಿನದಂದು ಸಲ್ಲುವಂತಾಗಬೇಕೆಂಬ ಕಲ್ಪನೆಯ ಕುಡಿಯೊಂದು ಕೊನರಿದಾಗ ಪ್ರಿ. ಇಂಚಲ ಅವರು ಅದಕ್ಕೆ ನೀರೆರೆದು ಸುಳಿಗಾಳಿ ಸೂಸಿದರು. ಈ ಗಡಿನಾಡಿನ ಕನ್ನಡಿಗರಿಗೆ ಬರುವ ವಿಶಿಷ್ಟತರದ ಅನುಭವಗಳನ್ನು ಕನ್ನಡಿಸುವ ಕವನಗಳನ್ನೆಲ್ಲ ಒಂದೆಡೆಗೆ ಕೂಡಿಸಬೇಕೆಂದೂ, ಅದರಿಂದ ಇಲ್ಲಿಯ ಹಿರಿ-ಕಿರಿಯ ಕವಿಗಳಲ್ಲೊಂದು ಬಗೆಯ ಸಂಘಟಿತ ಆತ್ಮೀಯತೆ ಬೆಳೆದು ಹೊಸ ಕಾವ್ಯಸೃಷ್ಟಿಗೆ ಸಹಾಯಕವಾಗಬಹುದೆಂದೂ, ಇಂಥದೊಂದು ಸಂಕಲನದಿಂದ ಒಂದೊಂದು ಜಿಲ್ಲೆಯಲ್ಲಿರುವ ಕಾವ್ಯಶಕ್ತಿಯ ಪ್ರಮಾಣವನ್ನು ನಾಡವರು

ಕಂಡುಕೊಳ್ಳುವಂತಾಗಬಹುದೆಂದೂ ಆಶಿಸಿ ಈ ಸಂಕಲನದ ಕಾರ್ಯಕ್ಕೆ ನಾವು ಮೊದಲು ಮಾಡಿದೆವು. ಈ ವಿಷಯವನ್ನು ಕೇಳಿ ಪ್ರಿ. ವಿ. ಕೃ. ಗೋಕಾಕ, ಡಾ. ಡಿ. ಎಸ್. ಕರ್ಕಿ, ಶ್ರೀ. ಚೆನ್ನವೀರ ಕಣವಿ ಇತ್ಯಾದಿ ಹಿರಿಯ ಸಾಹಿತಿಗಳೂ, ಇಲ್ಲಿಯ ಕಾಂಗ್ರೆಸ್ ಕಾರ್ಯಕರ್ತರೂ ಈ ಕಾರ್ಯನಿರ್ವಹಣೆಗೆ ಬೆಂಬಲ ನೀಡಿದರು. ಅವರೆಲ್ಲರ ಸಹಾಯ ಸಹಕಾರಗಳಿಂದಾಗಿಯೇ ಕವಿಗಳ ಕಲ್ಪನೆಯ ಈ ವಿಜಯಮಂಟಪದಲ್ಲಿ ಇಂಥ ಕಾವ್ಯದುಂದುಭಿ ಮೊಳಗುವದು ಅನುಕೂಲವಾಯಿತು. ಪ್ರಸ್ತುತ ವಿಜಯಮಂಟಪದ ನಾಲ್ಕು ಆಧಾರಸ್ತಂಭಗಳಾಗಿ ನಮ್ಮ ಜಿಲ್ಹೆಯ ಪ್ರಸಿದ್ಧ ಸಾಹಿತಿಗಳಾದ ಮಾನ್ಯ ಬಸವರಾಜ ಕಟ್ಟೀಮನಿ, ಕೃಷ್ಣಮೂರ್ತಿ ಪುರಾಣಿಕ, ಮಿರ್ಜಿ ಅಣ್ಣಾರಾಂ ಈಶ್ವರ ಸಣಕಲ್ಲ-ಇವರುಗಳು ಈಸಂಕಲನದ ಸಂಪಾದನಾಕಾರ್ಯದಲ್ಲಿ ಸೂಕ್ತ ಸಲಹೆಗಳನ್ನು ನೀಡಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಬೆಳಗಾವಿಯ ಪ್ರತಿನಿಧಿಗಳಾಗಿ ಸೇವೆ ಸಲ್ಲಿಸುತ್ತಿರುವ ಅನುಭವಿಕ ಹಿರಿಯರಾದ ಶ್ರೀ. ಎಸ್. ಎಮ್. ದೇಸಾಯಿ ರುದ್ರಾಪುರ ಅವರು "ಬೆಳಗಾವಿ ನಾಡಿ"ನ ಸಮಯೋಚಿತ ಶಬ್ದಚಿತ್ರವನ್ನು ಬರೆದುಕೊಟ್ಟು ಉಪಕರಿಸಿದ್ದಾರೆ. ಪ್ರಿ. ಎಸ್. ಡಿ. ಇಂಚಲ ಅವರಂತೂ ಈ ಕಾರ್ಯದಲ್ಲಿ ಗಳಿಗೆಗಳಿಗೆಗೂ ನೆರವಾಗಿದ್ದಾರಲ್ಲದೆ, ಕೋಟೆಯ ಬಾಗಿಲಲ್ಲಿ ಮುನ್ನುಡಿಯ ತೋರಣ ಕಟ್ಟಿ ಸಿಂಗರಿಸಿದ್ದಾರೆ. ಬಹುಪರಿಯಾಗಿ ಸಹಾಯ ಸಲ್ಲಿಸಿರುವ ಈ ಎಲ್ಲ ಆತ್ಮೀಯ ಹಿರಿಯರಿಗೆ ನಮ್ಮ ಅನಂತ ಕೃತಜ್ಞತೆಗಳನ್ನು ಹೃತ್ಪೂರ್ವಕವಾಗಿ ಸಲ್ಲಿಸುತ್ತೇವೆ.

ಈ ಯೋಜನೆಗೆ ನಮ್ಮ ಜಿಲ್ಹೆಯ ಎಲ್ಲ ಕವಿಗಳೂ ಬಲು ಉತ್ಸಾಹದ ಸ್ವಾಗತ ನೀಡಿ ಸಹಕರಿಸಿದ್ದಾರೆ. ಎಲೆ ಮರೆಯ ಹೂಗಳಂತೆ ತಮ್ಮ ನಿತ್ಯಜೀವನದಲ್ಲೇ ಹುದುಗಿಕೊಂಡಿದ್ದ ಕವಿಗಳನೇಕರು ಈಗ ಹೊರಬಂದು ಈ ಕಾರ್ಯಕ್ಕೆ ಕೈನೀಡಿದ್ದಾರೆ. ಇಂಥ ಹೊಸಬರಿಗೂ ಕಾರ್ಯಸ್ಫೂರ್ತಿ ದೊರೆಯಬೇಕೆಂಬುದೂ ನಮ್ಮ ಉದ್ದೇಶವಾಗಿದೆಯಾದ್ದರಿಂದ ಅವರೆಲ್ಲರ

ಕವನಗಳನ್ನೂ, ಸಲಹಾಸಮಿತಿಯ ಸಹಾಯದಿಂದ ತಿದ್ದಿ-ತೀಡಿ ಒಂದು ಸಂಕಲನಕ್ಕೆ ಬೇಕಾಗುವ ಮಟ್ಟವನ್ನು ಕಾಯ್ದುಕೊಳ್ಳಲು ಪ್ರಯತ್ನಿಸಲಾಗಿದೆ. ಪ್ರತಿಯೊಂದು ಕವನವನ್ನೂ ಅಭ್ಯಾಸದೃಷ್ಟಿಯಿಂದ ಓದಿದಾಗ ಮನಸ್ಸಿನ ಮೇಲುಳಿಯುವ ಪರಿಣಾಮವನ್ನೇ ಮುಖ್ಯ ಪ್ರಮಾಣವಾಗಿಟ್ಟುಕೊಂಡು ಎಲ್ಲ ಕವನಗಳನ್ನೂ ನಾಲ್ಕು ವಿಭಾಗಗಳಲ್ಲಿ ವಿಂಗಡಿಸಲಾಗಿದೆ. ಈ ವಿಭಜನೆಯಲ್ಲಿ ಕವಿತೆಯ ಸಾಲುಗಳಾಗಲೀ, ಕವಿಗಳ ಹೆಸರುಗಳಾಗಲೀ ಭಾಗವಹಿಸದೆ, ಪ್ರತಿಯೊಂದುಕವಿತೆಯ ಒಟ್ಟು ಭಾವಪರಿಣಾಮವೆ ತಳಹದಿಯಾಗಿ ನಿಂತಿದೆ. ಈ ರೀತಿಯ ಸಂಪಾದನ- ಕಾರ್ಯ ಮುಕ್ತಾಯಗೊಂಡು ಈ ಕವಿಬಳಗದ ಪರಿಚಯಸಹಿತವಾದ ಹಸ್ತಪ್ರತಿ ಮುದ್ರಣಾಲಯ ಸೇರಿದ ಬಳಿಕ ಬಂದ ಕೆಲ ಕವನ-ಲಾವಣಿಗಳನ್ನು ಇದರಲ್ಲಿ ಸೇರಿಸಲಾಗದ್ದಕ್ಕೆ ವಿಷಾದ ವ್ಯಕ್ತಪಡಿಸಿ, ನಮ್ಮೊಡನೆ ಸಹಕರಿಸಿದ ಎಲ್ಲ ಹಿರಿ-ಕಿರಿಯ ಕವಿಗಳಿಗೂ ಅಭಿವಂದನೆಗಳನ್ನು ಸಲ್ಲಿಸುತ್ತೇವೆ. ಈ ಸಂಕಲನವನ್ನು ಸುಂದರವಾಗಿ ಅಚ್ಚು ಮಾಡಿ ಕೊಟ್ಟ ವಿಶ್ವಭಾರತ ಮುದ್ರಣಾಲಯದ ವ್ಯವಸ್ಥಾಪಕರಾದ ಶ್ರೀ. ಡಿ. ಎಸ್. ಕಬಾಡಗಿಯವರಿಗೂ, ಅವತ ಕಂಪನಿಯ ಸಂಚಾಲಕವರ್ಗಕ್ಕೂ ನಾವು ತುಂಬಾ ಕೃತಜ್ಞರಾಗಿದ್ದೇವೆ.

ಗಡಿನಾಡಿನ ಈ ನುಡಿಗಾಣಿಕೆಯನ್ನು ಹೊಸನಾಡ ಹೊರಗುಳಿದ ಎಲ್ಲ ಕನ್ನಡ ಕಂದರಿಗೆ ಸಹಾನುಭೂತಿಪೂರ್ವಕವಾಗಿ ಸಮರ್ಪಿಸಲಾಗಿದೆ. ಇಂದಿಲ್ಲ ನಾಳೆ ನಾವೆಲ್ಲ ಒಂದಾಗುವ ಆತ್ಮವಿಶ್ವಾಸದೊಡನೆ ಅವರೂ, ಏಕೀಕೃತ ಕರ್ನಾಟಕದ ಎಲ್ಲ ಕನ್ನಡಿಗರೂ ಈ 'ದುಂದುಭಿಯ ಅಲೆಗಳ'ನ್ನು ಆತ್ಮೀಯತೆಯಿಂದಾಲಿಸಿ ಪ್ರೋತ್ಸಾಹಿಸುವರೆಂದು ನಂಬಿಕೆ.

ಭೆಂಡಾರ ಬೀದಿ
ಬೆಳಗಾವಿ
ದಿ. ೧-೧೧-೫೬

ಬಿ. ಎ. ಸನದಿ

# ಬೆಳಗಾವಿ ನಾಡು

೧

ಬೆಳಗಾಯಿತೊ ಬೆಳಗಾವಿಯೊಳು
ಇರುಳಳಿಯಿತೊ ಬೆಳಗಾವಿಯೊಳು
ದಿನದಿನವು ಕನಸರಳುವದು ಇಲ್ಲಿಯ ನಸುಕಿನೊಳು
ದಿನದಿನವು ಬಗೆಯರಳುವದು ಇದೆ–ಊರಿನೊಳು,
ಬೆಳಗಾವಿಯೊಳು ಚೆಲುವಿನ ಬೆಳಗಿನೊಳು
ಬೆಳಗಾಗುವುದು ಕನಸಾಗುವುದು
    ಚೆಲುವಿನ ಬೆಳಗೆ – ಕನಸಿನ ಬೆಳಗೆ!
    ಕನಸಿನ ಬೆಳಗೆ – ನೆನಪಿನ ಬೆಳಗೆ!

೨

ಬೆಳಗಾಯಿತೊ ಬೆಳಗಾವಿಯೊಳು
ಕನಸಾಯಿತೊ ಬೆಳಗಾವಿಯೊಳು
ಕನಸಾಗುವದು ಬೆಳಗಾಗುವದು ಇರುಳಿನೊಳು
ಇರುಳಾಗುವದು ಬೆಳಗಾಗುವದು ಕಡು ಚೆಲುವಿನೊಳು
ಉದಯದ ರಾಗವು ಏಳ್ಗೆಯ ಬೆಳಗಿಗೆ ಕಣಸೆಂಬೆ.
ಬೆಳಗಾವಿಯೊಳು ಉದಯದ ಬೆಳಗಿನೊಳು
    ಕನಸಿನ ಬೆಳಗೆ –ಒಲವಿನ ಬೆಳಗೆ!
    ನೆನಪಿನ ಬೆಳಗೆ – ಇರುಳಿನ ಬೆಳಗೆ!

೩

ಬಳಿಯೊಳು ಬೆಳಗುಂದಿ ಸರದೊಳು
ಬೆಳಗಾಯಿತೊ ಏಳೂರಿನೊಳು
ಕೋಟೆಯ ಸುತ್ತ ಕನಸು ನೆನಸಿನ ಏರಿ ನೋಡು
ಹಳೆಮರ ಬನವುಸಾಲು ತಂಪಿನ ಮನೆಯು ನೋಡು
ಬೆಳಗಾಗುವದು ಹಾಯಾಗುವದು ಇದೆ ಏರಿನೊಳು
ಬನವಾಗುವದು ತಂಪಾಗುವದು ಇದೆ ಇರವಿನೊಳು

ಕನಸಿನ ಬೆಳಗೆ – ಇರುಳಿನ ಬೆಳಗೆ!
ಒಲವಿನ ಬೆಳಗೆ – ನಸುಕಿನ ಬೆಳಗೆ!

೪

ಪರಸಗಡ ಒಕ್ಕುಂದ ನಡುವೆ ರೇಣುಕೆ ತಂಗಿಹಳು:
ಸೀಮೆಯು ನೆರೆಯನು ಜನವನು ಬದುಕನು ಸೆಳೆದಿಹಳು
ಮುರಗೋಡು ಹೊಸೂರು ನಾಡು ಇರವನು ಬಳಸಿಹುದು.
ಇಂಚಲೊ ಮುತ್ತಿನ ಗೊಂಚಲೊ ಬಳ್ಳಿಗೆ ಹರಡಿಹುದು.
ಹೂವಿನ ಕೇರಿಯೆ ತುರುಕರ ಹೆಸರನು ಉಳಿಸಿಹುದು.
ಅಥಣಿಯು ನಾಡಿನ ನತ್ತೆನೆ ಹಳ್ಳಿಗೆ ಸುತ್ತಿಹುದು.
ಗೋಕಾವಿ ಊರು ಘಟಪ್ರಭೆ ಆಸರಕೆ ತಂಗಿದೆ:
ಹಳೆಯೂರು ಹೊಸತಿಸಿ ಇಲ್ಲಿ – ಹೊಳೆಯೂರು ಎದ್ದಿದೆ.
ಕರಿಹೊಳೆ ರಭಸದಿ ಹರಿದಿದೆ – ನಡುಮನೆ ಬೆಳಗಿದೆ
ಅಂಗಳದಿ ಹೂವು – ಹಕ್ಕಲದಿ ಪೈರು ಮುಸಗಿದೆ.

೫

ಜೈನರು ಜೇಡರು ಮೇದರು ಕುರುಬರು ಕಟ್ಟಿದ ನಾಡು
ಬೆಳಗುಂದಿ ನಾಡು ಏಳಾಗಿ ಬೆಳೆದು ನಿಂತಿಹ ನಾಡು
ಕಾಗತಿ ತವರಿನ ಚೆನ್ನೆಯು ಕಸುವೆನೆ ಪುಟ್ಟಿದ ನಾಡು
ಮೂಗುತಿ ಹರಳಿನ ಕನ್ನೆಯು ಕೆಚ್ಚೆನೆ ನಿಂತಿಹ ಬೀಡು
ಕಿತ್ತೂರೊ ಮುತ್ತೂರೊ ಹೊಮ್ಮುತಿದೆ:
ಹುಡಿಮಣ್ಣು ವೀರರಸ ಚಿಮ್ಮುತಿದೆ
ಕಣ್ಣಾಗಿ ಗುಡಿಯಾಗಿ ಬೆಳಗುತಿದೆ.
ಹೊನ್ನಾಗಿ ಕುಡಿಯಾಗಿ ತೊಳಗುತಿದೆ
ಕೆಂಧೂಳಿ ಕಲಿತನವ ಸಾರುತಿದೆ
ಇಂದಿಗೂ ಹಿರಿತನವ ಬೀರುತಿದೆ.
ಆರೇರ ನಾಡಲ್ಲ – ಅರಿಯಿರೋ
ನಮ್ಮವರ ನಾಡಿಂಗೆ ನಂಬಿರೋ

ಬೆಳವಡಿಯ ಮಲ್ಲಮ್ಮನ ನೆನೆಯಿರೊ !
ನಮ್ಮವರ ನಾಡಿಂಗೆ ನಮಿಸಿರೋ !

ರಟ್ಟರ ಹಾಸಿಗೆ ಚದುರಿತು—ನೆಲಮನೆ ಬಿಟ್ಟಿಹ ನಾಡು-
ಶಿರಸಂಗಿ ಕೋಟೆ ಕಂಡಿತು-ಬಿಳಿಗಲ್ ಕೊಟ್ಟಿಹ ನಾಡು-
ಅಸದನ ಕಿಲ್ಲೆಯೆ ಎದ್ದಿತು-ಕರಿಗಲ್ ಇಟ್ಟಿಹ ನಾಡು-
ಕೊಂಕಣ ಸೆರಗಿಗೆ ಬಾಗಿಲ ನಿಲ್ಲಿಸಿ ಮೆರೆದಿಹ ನಾಡು-
ಮಿರಂಜಿ ಗಡಿನುಡಿ ಕನ್ನಡ ನೆಲೆಯನು ಬೀರಿದ ನಾಡು-
ನಾಡಿನ ನಾಯಕ-ಬೇಡರು ಉಸುರಿದ ಕಾಡೂ-ಬೀಡು-

– "ವೇಳುಗ್ರಾಮೊ- ವೇಣುಗ್ರಾಮೊ" ಅದಾವುದು ?
ಕದಂಬರು ಕಟ್ಟಿದಾ ಕಟ್ಟಾವುದು ?
ದೇಗಾವಿ ನಲ್ಗುಡಿಯ ಬೀಡಾವುದು ?
ಗೋಪಕರ ದೇವಗಿರಿ ಇಲ್ಲಾವುದು ?
ಆಳ್ದವರ ನಾಡಿಂಗೆ ನಾವಾಳೊ ?
ಬಿದ್ದವರ ಎದ್ದವರ ಮೇಲಾಳೊ ?
ಗೆದ್ದವರ ಇದ್ದವರ ಕೂಟಾಳೊ ?
ಓ. ದೇ. ಶಿ. ಕನ್ನಡರ ಅರಸಾಳೊ ?
ತಿರುಳೆಂಬ ಕನ್ನಡಕೆ ಸೆರೆಯಾಳೊ ?
ಬೆಳಗಾವಿ ಸೊಕ್ಕಾಳೊ ಗುರಿಯಾಳೊ ?

—ಓ. ದೇ. ಶಿ.

# ದುಂದುಭಿಯ ಅಲೆಗಳು :

# ಬಂದೆಯಾ! ಬಾ ತಾಯೆ! ನಿನಗೆ ಸುಸ್ವಾಗತಂ!

೧

ಬಂದೆಯಾ! ಬಾ ತಾಯೆ! ನಿನಗೆ ಸುಸ್ವಾಗತಂ!
ಈಸು ದಿನಗಳ ನಮ್ಮ ಬಯಕೆ ಹಣ್ಣಿಸಿದಂತೆ,
ಬಂದೆಯಾ! ಬಾ ತಾಯೆ! ನಿನಗೆ ಸುಸ್ವಾಗತಂ!
ಆದೊಡೇಕೌ ಕಣ್ಣು ಹನಿಗೂಡಿ ನಿಂತಿಹವು?
ಕೊರಗು-ಕಳವಳಗಳಲಿ ಕಾಯ ಸಣ್ಣಿಸಿದಂತೆ
ಆವ ದುಗುಡವ ನಿನ್ನ ಕರಣಂಗಳಾಂತಿಹವು?
ಲಕ್ಷಾನುಲಕ್ಷ ಮಕ್ಕಳ ವಿಯೋಗದ ವ್ಯಥೆಯೊ?
ಅಂಗಾಂಗ-ಊನೆಯುಹ ವಿಷಮ-ದಾರುಣ-ಕಥೆಯೊ!
ಕಾಲವೋ, ಕರ್ಮವೋ, ನಮ್ಮಾತ್ಮ-ವಿಸ್ಮೃತಿಯೊ,
ದುರ್ಲಕ್ಷವೋ, ಅಲಕ್ಷವೋ, ಅನೈಕ್ಯ-ಸ್ಥಿತಿಯೋ,
ಆವ ಪಾಡಿಗೆ, ಅಯ್ಯೊ! ನೀನಿಂತು ಮೌನದಲಿ
ಕೊರಗುತಿಹೆ! ಸೊರಗುತಿಹೆ! ಶೋಕ-ವಿಷ-ಪಾನದಲಿ!
ವಿಷವೀಂಟಿಯುೂ ಶಿವನು ಚಿರಹಸಿತನಾಗಿಹನು!
ವಿಶ್ವವನು ರಕ್ಷಿಸೆ, ಕೃಪಾ-ಭಸಿತನಾಗಿಹನು!

೨

ಅದಕಾಗಿ ಓ ತಾಯೆ, ನಗೆಗೂಡು! ಕಳೆಗೂಡು!
ಗತ-ವಿಷಮ-ವಿಷ-ಸ್ಮೃತಿಯನೆಲ್ಲವಾಚೆಗೆ ದೂಡು!
ಇದ್ದ ಮಕ್ಕಳು ಶುದ್ಧ ಹೃದಯದ ತಪಸ್ಸಿನಿಂ,
ಸಖ್ಯೈಕ್ಯ-ಸದಯ-ಸಹಕಾರ-ತೇಜಸ್ಸಿನಿಂ,
ಮಾನವತೆ, ಅತಿಮಾನವತೆ, ದೇವ-ಮಾನವತೆ
ಕಂಡುಂಡ ಸ್ವಾನುಭವ-ದಿವ್ಯಾನುಭಾವ-ದ್ಯುತಿ—
ಧೃತಿಯಿಂದೆ, ಚ್ಯುತಿ-ರಹಿತಮತಿಯಿಂದೆ, ಕೃತಿಯಿಂದೆ,
ಬಂದಿಹೆವು, ರಸ-ಕಲಾ-ಜ್ಯೋತಿ-ಸಂಹತಿಯಿಂದೆ!
ಈ ಮಂಗಲೋದಯದಿ ತುಂಗ-ಭಾವೋಜ್ವಲೆಯೆ,
ಕನ್ನಡಾಂಬೆಯೆ, ದಿವ್ಯ-ದೇದೀಪ್ಯ-ಸತ್ಕಲೆಯೆ,
ನಿನ್ನಡಿಯ ಪೂಜಿಸಲು ಬಂದಿಹೆವು! ಸ್ವೀಕರಿಸು
ನಿನ್ನ ಶಿಶುಕೋಟಿ-ಹೃತ್ಪೂಜಾ-ನಿವೇದನೆಯ!
ಪರಿಪೂರ್ಣತೆಗೆ ಸಂದು, ಕಳೆಯೆಲ್ಲ ವೇದನೆಯ!
ಅಡಿಗೆರಗಿ ಬೇಡುವೆವು! ಅಭಯವೀಯುತೆ ಹರಸು!

— ಈಶ್ವರ ಸಣಕಲ್ಲ

## ನಮಿಸೋಣ ಬಾ ಗೆಳತಿ !

೧

ನಮಿಸೋಣ ಬಾ ಗೆಳತಿ ! ಕನ್ನಡದ ಬಾವುಟಕೆ
ಬಿಡುಗಡೆಯ ಹಾಡು ಹಾಡಿ
ನಾವೆಲ್ಲರೊಂದುಗೂಡಿ
ಕರೆದು ಮಕ್ಕಳಿಗೆಲ್ಲ ಹೇಳೋಣ ಸವಿಸೊಲ್ಲ
ಬಾವುಟದ ಕೆಳಗೆ ಕೂಡಿ
ಸವಿಗತೆಯ ಸವಿಯ ಮಾಡಿ
ಬೀರೋಣ ಬಾ ಮಡದಿ ! ಬಿಡುಗಡೆಯ ನೆವಕಾಗಿ
ಸಕ್ಕರೆಯ ಸವಿಯ ಮಾಡಿ
ಮಕ್ಕಳಿಗೆ ಮಮತೆಗೂಡಿ !

೨

ಹಂಗಿನ ಮನೆಯಲ್ಲಿ ಶತಮಾನಗಳ ಬೇನೆ
ಸಹಿಸಿದಳು ಸೋವಿನಿಂದೆ
ಕಹಿ ಬಾಳ ಗೋಳಿನಿಂದೆ.
ಜೀವ ಸಾವುಗಳಲ್ಲಿ ಜನುಮ ಜೀಕುತಲಿರಲು
ತೂಗಿದಳು ನಿಲ್ಲದಂತೆ-
ಹೋರಾಟದುಸಿರಿನಿಂದೆ.
ಜೀವ ಝಲ್ಲೆನುವಂತೆ ಸಾವು ನರ್ತಿಸುತಿರಲು
ಬಿಡುಗಡೆಯ ಹಂಬಲಿಂದೆ
ಸಾಗಿದಳು ಕನ್ನಡಾಂಬೆ.

೩

ಬಂತು ಕನ್ನಡಕಿಂದು ಹೊಸ ಯುಗದ ಕನಸಿಂದು
ನನಸಾಗಿ ಬಂದು ನಿಂತು
ಹೊಸ ಬೆಳೆಯಿತಿಂತು.
ಹೊಸ ಬಾನು ತಿಳಿಯಾಗಿ ಬೆಳಕು ಹೊಳೆಹೊಳೆಯಾಗಿ

ಬಾನೆಲ್ಲ ಬೆಳಕು ಕಂಡು
ಬೆಳಗುವದು ಬೆಳಕನುಂಡು–
ಅಲ್ಲಿ ಬಾನೆಡೆಯಲ್ಲಿ ನೋಡದೋ ನೋಡಲ್ಲಿ !
ಬಿಡುಗಡೆಯ ಕದಿರಿನಲ್ಲಿ
ಬೆಳಗುವನು ನೇಸರಲ್ಲಿ.

೪

ತಳಿಗೆಯನು ತಾ ಮಡದಿ ! ಆರತಿಯ ಬೆಳಗೋಣ
ಸ್ವಾತಂತ್ರ್ಯ ಸೂರ್ಯಗಿಂದು
ಭಾರತದ ಬೆಳಕಿಗಿಂದು
ಜನುಮ ಜನುಮದ ಪುಣ್ಯ ತೇಲಿ ಬಂದಿಹುದಿಂದು
ಬಿಡುಗಡೆಯ ಕಾಣಲೆಂದು.
ಸಡಗರವ ನೋಡಲೆಂದು.
ನಮಿಸೋಣ ಬಾ ಗೆಳತಿ ! ಬಾ ! ಮಕ್ಕಳೊಡಗೂಡಿ
ಬಾವುಟದ ಕೆಳಗೆ ಕೂಡಿ
ನಾವೆಲ್ಲರೊಂದುಗೂಡಿ.

—**ಕೃಷ್ಣಮೂರ್ತಿ ಪುರಾಣಿಕ**

# ಶುಭ ನುಡಿಯೆ ಶಕುನವಕ್ಕಿ !

೧

ಇಂದಿನೀ ಶುಭ ದಿನದಿ ಶುಭ ನುಡಿಯೆ ಶುಭ ನುಡಿಯೆ
ಶುಭ ನುಡಿಯೆ ಶಕುನವಕ್ಕಿ
ಒಂದೆ ತಾಯ್ ಮಕ್ಕಳೊಂದಾಗಿ ಬಾಳುತಿರೆ ಬರಲಿ
ನಿನ್ನ ಸವಿದನಿಯೆ ಉಕ್ಕಿ !

೨

ಬಂಧು- ಬಾಂಧವರೆಲ್ಲ ಅಣ್ಣ- ತಮ್ಮದಿರೆಲ್ಲ
ಮಹಾದೇವಿಯುಡಿಸೇರಿ
ನಿಂದಹೆವು ದೀಪ- ಧೂಪವನೆತ್ತಿ, ಹೊರಗುಳಿದ
ಬಳಗವನು ಕರೆಯುತೊದರಿ !

೩

ಮದುವೆಯಾ ಮಂಟಪದಿ ಮುಹೂರ್ತಕೆ ಮೊದಲು
ಸೇರ್ವ ಜನ ವರ ಹೊಂದದೆಂದೆ
ಮುದದ ಮೋಜಿನೊಳೇನಾದರೊಂದಪನುಡಿಯೆ
ಮಾಡುವರೆ ಅದನೆ ಮುಂದೆ ?

೪

ನಿಲ್ಲುವುದೆ ಮದುವೆ ? ನೆನೆವರೆ ನೆಂಟರಿಷ್ಟರಾ
ಹೋಳಿಗೆಯ ಜನದ ನುಡಿಯ ?
ಬಲ್ಲವರು ವಧುವರರು ಒಂದಾಗಿದಿರಬಹುದೆ?
ಪಡೆಯರೆ ಮಕ್ಕಳು- ಮರಿಯ ?

೫

ಕನ್ನಡದ ಕಸ್ತೂರಿ ಮೈಸೂರ ಮಲ್ಲಿಗೆಯೊ-
ಳಡಗಿರುವ ಗಂಧವೊಂದೆ.
ಮುನ್ನಮಾವದೊ ಇರಲಿ, ಮಗು ಜನಿಸಿದಾ ಮೇಲೆ
ಹೆಸರಿಡುವ ಹಿಂದಿನಿಂದೆ !

೬

ಅಂತೆ ಒಂದಾಗಿ ನಿಂದಿರುವ ನಮ್ಮೆಲ್ಲರಲಿ
ಹರಿವ ರಕ್ತವದು ಒಂದೆ !
ಚಿಂತೆಯೇಕಿನ್ನು ಬನ್ನಿರೋ ಸೋದರರೆ ,
ಕನ್ನಡ ಕುಲವೆಂದಿಗೊಂದೆ !

೭

ಇಂದಿನೀ ಶುಭ ದಿನದಿ ಶುಭ ನುಡಿಯೆ ಶುಭ ನುಡಿಯೆ
ಶುಭ ನುಡಿಯೆ ಶಕುನವಕ್ಕಿ !
ಒಂದೆ ಕುಲ ಒಬ್ಬಳೆ ತಾಯ್ ಕನ್ನಡವೆಂದೆಂದು
ಶುಭ ನುಡಿಯೆ ಶಕುನವಕ್ಕಿ !

—ಮಿರ್ಜಿ ಅಣ್ಣಾರಾಯ

## ಕನ್ನಡಾಂಬೆ ಬಾ !

ಭಾಗ್ಯದ ಕನ್ನಡಾಂಬೆ ಬಾ
ಭಾಗ್ಯದ ಕನ್ನಡಾಂಬೆ ಬಾ ||

ಭಕ್ತಿಯ ಭಾಗ್ಯದ ಶಕ್ತಿಯ ನಿಧಿಯೆ
ಮುಕ್ತ ಮನುಜರಾಸಕ್ತಿಯ ಸುಧೆಯೆ
ಶಕ್ತ ಮಾನವರನಿತ್ತಿಹ ದಯೆಯೆ
– ಕನ್ನಡಾಂಬೆ ಬಾ ||

ಹರಿದು ಹೋದ ನೀ ಮರವೆಯೊಳಿದ್ದೆ
ಮರವೆಯ ಯೋಗದ ಶಕ್ತಿಯೊಳಿದ್ದೆ
ನಿರುಪಮ ಚೇತನ ಮುಕ್ತಿಯ ಗೆದ್ದೆ
–ಕನ್ನಡಾಂಬೆ ಬಾ ||

ವಿಶ್ವಮೇಳದೊಳು ಮೆರೆಯುವ ಯಾಗ
ನಿನ್ನ ಐಕ್ಯದಾ ಮಂಗಲ ಯೋಗ
ಹಾಡುವುದೀ ಗಡಿ ಉದಯದ ರಾಗ
–ಕನ್ನಡಾಂಬೆ ಬಾ ||

ವೇದವ ಬೆಳಗಿದ ಹೇ ಸ್ಫುಲಿಂಗ
ಯೋಗಶಕ್ತಿಯು ನಲಿಯುವ ರಂಗ
ವಿಶ್ವವು ಕಾದಿದೆ ನಿನ್ನಯ ಸಂಗ
–ಕನ್ನಡಾಂಬೆ ಬಾ ||

— ವೀ. ಶಿ. ಕಂಬಿ

## ಓ ತಂಗಿ ಏಳಿನ್ನು!

ಓ! ತಂಗಿ ಏಳಿನ್ನು ಎಚ್ಚರಾಗು!
ಮೂಡಣದಿ ಮೂಡಿಹುದು ಬೆಳ್ಳಿ!
ಗಳಿಗೆಯಿನ್ನೊಂದರಲಿ
ಬಂದೆ ಬರುವಳು ಉಷೆಯು ಪೂರ್ವರಂಗದಲ್ಲಿ!
ಓ! ತಂಗಿ ಏಳಿನ್ನು ಎಚ್ಚರಾಗು!
ನಾಡೆದೆಯ ಅಂತರಾಳದಲಿ
ಮೂಡಿತ್ತು ಹೊಂಗನಸು.
ನಡುವೆಯೇ ಮೊಗದೋರಿ ಗುಡುಗುಡಿಸಿದಾ ಮೋಡ–
ಮಳೆ ಗಾಳಿ ಧೂಳಿಗಳ ಧಾಳಿಗಳ ದಾಟಿ,
ನಿಚ್ಚಳದ ಬಾನಿನಲಿ ಮೂಡಿಹುದು ಅಚ್ಚಗನ್ನಡ ತಾರೆ!

ಓ! ತಂಗಿ ಏಳಿನ್ನು ಎಚ್ಚರಾಗು!
ಬರುತಲಿಹ ತಾಯಡಿಗೆ
ರಾಜರಾಜೇಶ್ವರಿಗೆ
ಸ್ವಾಗತವ ಬಯಸೋಣ!
ಮಡಿ ನೀರ ತಂದಿಹೆನು.
ಏಳು, ಅಂಗಳ ಗುಡಿಸಿ
ಮಂಗಳದ ರಾಗದಲಿ ಉದಯರಾಗವ ಹೇಳಿ
ಹಾಕು ಬಣ್ಣದಿ ನಿನ್ನ ಬಯಕೆಗಳ ರಂಗೋಲಿ!–
ನೋಡಿ ತಾಯಿಯ ಹೃದಯ ತುಂಬಿ ಬರಲಿ!
ಗಂಧಪತ್ರಿಯ ಜೊತೆಗೆ
ಘಮಘಮಿಪ ಹೂ ತಂದು
ಧೂಪದೀಪವ ಹಚ್ಚಿ
ಹೃದಯದಾರತಿ ಬೆಳಗಿ ಕೈಯ ಮುಗಿದು,
ತಾಯಿಯನು ಪೂಜಿಸುವ, ಏಳಮ್ಮ ಏಳು!

ಓ! ತಂಗಿ ಏಳಿನ್ನು ಎಚ್ಚರಾಗು!
ತಡವೇಕೆ?–ಶುಭವು ಬುವಿಗಳಿವ ಗಳಿಗೆ!
ಅರುಣಿಮೆಯು ಮೂಡುತಿದೆ
ಹೊಂಗಿರಣ ಹಾಸಿನಲಿ.
ಗಳಿಗೆಯಿನ್ನೊಂದರಲಿ
ಬಂದೆ ಬರುವಳು ತಾಯಿ;
ಓ! ತಂಗಿ ಏಳಿನ್ನು ಎಚ್ಚರಾಗು!

—ಶ್ರೀಚೆನ್ನತನಯ

# ತಾಯ ಪೂಜೆಗೆ ಬನ್ನಿ !

ಬನ್ನಿರೈ ಗೆಳೆಯರಿರ, ಬನ್ನಿರೈ ಕಿರಿಯರಿರ,
ಬನ್ನಿರೈ ಹಿರಿಯರಿರ, ಬನ್ನಿರೈ ಕಿರಿಯರಿರ
ತಾಯಪೂಜೆಯಗೈದು ಹೊಸಯುಗವ ತೆರೆಯುವಂ !
ಕನ್ನಡದ ಸೋದರರ್ ತಾಯ ದರುಶನಕೆಂದು
ಮನೆ-ಮಠಂಗಳ ಮೋಹವನೆ ತೊರೆದು ನಿಂದಿಹರ್ !
ವೀರರೆಂಬುವರೆಲ್ಲ, ಧೀರರೆಂಬುವರೆಲ್ಲ,
ಬುದ್ಧರೆಂಬುವರೆಲ್ಲ, ಸಿದ್ಧರೆಂಬುವರೆಲ್ಲ,
ತಾಯ ನಾಮಸ್ಮರಣೆಯಲಿ ಲೀನವಾಗಿಹರ್ !

ಹಾಳಾದ ಹೋಳಾದ ಬೀಳಾದ ನಮ್ಮ ಬಾಳ್
ಹೊಸ ರೂಹಿನುಡಿಗೆಯಂ ತೊಟ್ಟಹುದು ! ಮೇಣಿಂದು
ಹಸಗೆಟ್ಟ, ದೆಸೆಗೆಟ್ಟ, ನಾಡಮಂದಿರವಿಲ್ಲಿ
ಹೊಸತನದ ಬಣ್ಣದಿಂ ಕಣ್ಸೆಳೆಯುತಿದೆ, ಮೇಣ್
ಕನ್ನಡದ ಗರ್ಭಗುಡಿ ಬೆಳಗುತಿರೆ ನುಡಿಯ ಕಿಡಿ !
ಸೋಮಶತಕೋಟಿಸಂಕಾಶವೆನೆ ಕಣ್ಗೆಸಗಿ
ಬೆಳಗುತಿಹ, ತೊಳಗುತಿಹ ಪುಣ್ಯಸಿಂಹಾಸನದಿ
ತಾಯಿ ಭುವನೇಶ್ವರಿಯು, ರಾಜರಾಜೇಶ್ವರಿಯು
ಕನ್ನಡದ ಸರ್ವಸತ್ತ್ವವೆ ಮೂಡಿ ಬಂದವೊಲು
ವೀರ ತೇಜಸ್ಸಿನಲಿ, ಧೀರ ಮುಖಮುದ್ರೆಯಲಿ
ಚಂಡಿ ಮೆರೆದಿಹಳು ! ಮೇಣ್ ಚಾಮುಂಡಿ ಶೋಭಿಪಳು !

ಮತ್ತೆ ಕಾಣ್, ಕವಿಗಳೆಂಬುವರೆಲ್ಲ ಭಕ್ತಿಯಿಂ
ಹೃತ್ಪ್ರಣತಿಯಲಿ ಸ್ಫೂರ್ತಿ-ಬತ್ತಿಯನು ಸಲೆ ತೋಯಿಸಿ
ತಾಯಿಯಾರಾಧನೆಯಲ್ಲಿ ತನ್ಮಯರು ತಾವಾಗಿ
ಹಾಡ ಹಾಡುತ್ತಿಹರು ! ನಾಡ ಬೆಳಗುತ್ತಿಹರು !
ಬನ್ನಿರೈ ! ಬನ್ನಿರೈ ! ಎಲ್ಲರೆಲ್ಲರು ಬನ್ನಿ !

ವೀರರಿರ, ಗೆಳೆಯರಿರ, ಹಿರಿಯರಿರ, ಕಿರಿಯರಿರ
ಬನ್ನಿ ಓ! ಬನ್ನಿ ಓ! ತಾಯ ಪೂಜೆಗೆ ಬನ್ನಿ!
ಕನ್ನಡದ ನುಡಿ ಆಳ್ಗಿ! ತಾಯಿ ಚಿರಕಾಲ್ ಬಾಳ್ಗಿ!
ನಮೋ! ನಮೋ! ಓ ತಾಯಿ! ಭುವನೇಶ್ವರಿ!
ದೇವಿ ಜನಶಂಕರಿ! ರಾಜರಾಜೇಶ್ವರಿ!!

— ಎಚ್. ಸೂರ್ಯದೇವ

# ಮಂಗಲ ಹಾಡ ಬನ್ನಿ!

ನಾಡ ಪುಣ್ಯಕೆ ಬಣ್ಣವೇರಿತೊ, ಫಲಿಸಿತೋ ನಮ್ಮಾಶಯು!
ಇಲ್ಲದಾಯಿತೊ ನಾಡ ವಕ್ಷದಿ ಕುಣಿವ ವಿಧಿಗಿನ್ನಾಶ್ರಯು!
ಸುಪ್ತಚೇತನವೆದ್ದು ಕುಣಿಯುತಲಿಹುದು ಉಲಿಸುತೆ ಗೆಜ್ಜೆಯು,
ನಿದ್ದೆಯಿಂದೀಗೆದ್ದು ಬನ್ನಿರಿ ನೋಡಲೀ ಭಾಗ್ಯೋದಯು!

*

ನೆರೆಯವರ ದುರ್ಭಾವ–ದುರ್ನಡತೆಗಳನು
ಸಂತಾಪ–ಸಂಕ್ಲೇಶ–ಸಂಕಷ್ಟಗಳನು
ಸಹಿಸಿದಳೊ ನಲ್ದಾಯೆ ಕೊನೆಯು ವರೆಗೆ
ಸವೆಸಿದಳೊ ದೇಹವನು ನಮ್ಮ ಹಿತಕೆ!

*

ದುರ್ನಡತೆ ದರ್ಬಾರು ಎನಿತು ದಿನ ಸಾಗೀತು?
ಕೊನೆಗೊಮ್ಮೆ ತಾಳ್ಮೆಯೆ ಗೆಲ್ಲಬೇಕು!
'ತಾಳಿದವ ಬಾಳುವನು' ಎಂಬ ನುಡಿ ಸುಳ್ಳೇನು?
ಬಾಳುವದೊ ಸತ್ಯ ರವಿಯಿರುವವರೆಗು!

*

ಯೋಗಗೊಂಡಳು ತಾಯಿ ತ್ಯಾಗಿಯಾಗಿ,
ಹೊರಬಂದಳಿದೊ ಸೊಗದ ಭೋಗಿಯಾಗಿ!
ಕನಸುಣಿ ಕನ್ನಡ ನಾಡಿನ ಮೇಲೆ
ಚೆಲುವ ದಿನೇಶನ ಮಂಗಳ ಲೀಲೆ
ನಡೆದಿರೆ ಮೇಣ್ ಸೌಂದರ್ಯದ ಸೂರೆ
ಸ್ವರ್ಗಸುಖವದಿನ್ನೆಲ್ಲಿದೆ ಬೇರೆ?

*

ಕತ್ತಲೆಯ ಗರ್ಭದಿಂದೆದ್ದು ಬನ್ನಿ
ಅಮ್ಮನನು ಪೂಜಿಸುವ ಬೇಗ ಬನ್ನಿ!
ಧೂಪ–ದೀಪಗಳೇಕೆ, ಬನ್ನಿ ಬರಿದೆ
ಶುದ್ಧ ಹೃದಯವೊಂದಿರೆ ಸಾಲದೆ?

ಹೊಸ ಹೂಗಳರಳಿಹವು ಮಧುರ ಸೌರಭ ಸೂಸು–
ತೆಣ್ಣೆಸೆಗೆ! ನೋಡಿ ನೋಡಿ!
ಅಂತೆ ತಾಯ್ ಮೇಲ್ಮೆಯನು ಇಹಪರಕು ಸಾರಲಿಕೆ
ದನಿಯೆತ್ತಿ ಹಾಡೋಣ ಬನ್ನಿರೋಡಿ!

*

ಬನ್ನಿರೈ ಮಂಗಲದ ಮಧುಗೀತ ಹಾಡುತ್ತ
ಹರಿಸೋಣ ನಾಡೊಳಗೆ ಕಾವ್ಯಸಿಂಧು!
ಪಂಚಮದ ಇಂಚರದಿ ಹಾಡುತಿರೆ ಕೋಗಿಲೆಯು,
ದನಿಗೂಡಿಸುವ ಬನ್ನಿ ಕೂಡಿ ನಿಂದು!

*

ಮಂಗಳೆಯರೈತನ್ನಿ ಸಾಗಿಹುದು ತಾಯ್ ಪೂಜೆ
ಶುಭದ ಸೋಬಾನೆಗಳ ಹಾಡ ಬನ್ನಿ!
ಜೇನ ಸೋನೆಯೆ ಸುರಿಯುತಿರೆ ನಮ್ಮ ನಾಡಿನಲಿ
ಜೀವಪಾತ್ರೆಯ ತುಂಬಿಕೊಳ್ಳ ಬನ್ನಿ!

*

ವರ ಬೇಡಿದೊಡನೀವ ತಾಯ ಪೂಜೆಗೆ ಬನ್ನಿ
"ಎದುರಿಗಿಹ ಭಾಸ್ಕರನು ಇರುವವರೆಗು,
ಆ ಪ್ರಭೆಗು ಮಿಗಿಲಾಗಿ ನಿನ್ನ ಕೀರ್ತಿಯು ಜಗದಿ
ಮೆರೆಯಿಸಲು ಬಲವೆಮಗೆ ನೀಡು" ಎಂದು!

*

ಶುಭವಾರಿ ನಗೆ ಬೀರಿ ಪೂಜೆಗೊಳುವಳು ಬನ್ನಿ
ಅತ್ತಿತ್ತಲೆತ್ತಿಂದಲೋಡಿ ಬನ್ನಿ!
ಹಿರಿ–ಕಿರಿಯ ಭೇದಗಳ ತಾಮಸವ ಕಳೆಯಲಿಕೆ
ಪ್ರೀತಿಪ್ರಣತಿಯನಿಂದೆ ಬೆಳಗ ಬನ್ನಿ!

ಬನ್ನಿ! ಬನ್ನಿರಿ! ಬೇಗ ಬನ್ನಿರಿ!
ಬೇಗ ಮಂಗಲ ಹಾಡ ಬನ್ನಿರಿ!

— **ಚಂದ್ರಶೇಖರ ಕಂಬಾರ**

# ಭಾಗ್ಯೋದಯಕೆ ಸ್ವಾಗತ!

ಹಿಡಿ ಹಿಡಿ ಕೈಯೊಳು ಕನ್ನಡ ಕೇತನ;
ನಾಡ ನಾಡಿಯೊಳು ಹರಿಯಲಿ ಚೇತನ
ವಿಜಯಾನಂದದಲಿ!

ಕನ್ನಡ ತರುಣನೆ ಸಾಗೈ ಮುಂದಕೆ
ನಿನ್ನೆದೆ ಕೆಚ್ಚನು ತೋರುತ ವಿಶ್ವಕೆ
ವಿಜಯೋನ್ಮಾದದಲಿ!

ನಾಡಿನ ನವ ಅರುಣೋದಯವಾದುದು
ಬಹುದಿನಗಳ ಸವಿಗನಸಿಳೆಗಿಳಿದುದು
ಸಾಧನಪಥದಲ್ಲಿ!

ಎಂದಿಗು ಒಂದೇ ನಾಡಿದು ಕನ್ನಡ!
ಇದಕೆ ಎರಡು ಬಗೆವಾತನೆ ಮೂಢ
ಕನ್ನಡದೆದುರಿನಲಿ!

ಜಾತಿ–ಗೀತಿಗಳ ಕೋತಿಗಳಾಟವ
ತಡೆವುದು ಹೊಸ ಬಲ ಈ ಹುಲು ಬೇಟವ
ನಾಳಿನ ಬಾಳಿನಲಿ!

ಇನ್ನೇತಕೆ ಹಳೆ ಬಾಳಿನ ನರಳಿಕೆ?
ಸ್ವಾಗತಗೈಯುವ ಭಾಗ್ಯೋದಯಕೆ
ನವ್ಯೋತ್ಸಾಹದಲಿ!

— ಶಾಂತಿನಾಥ ಪಾಟೀಲ

# ವಿಜಯ

೧

ಕನ್ನಡ ನವಜೀವನಜನನವೆ
ಕರ್ನಾಟಕದೇಕೀಕರಣ!
ಕನ್ನಡ ಕನಸಿನ ಕಟ್ಟಡ ಪೂರಣ-
ಶುಭ ಸಂಸ್ಕೃತಿ–ಸಂಸ್ಕರಣ!

೨

ಕನ್ನಡ ದೀಕ್ಷಾಬಂಧನ ಜನಮನ
ಸೋಜ್ವಲ ಧ್ಯೈಯಸ್ಮರಣ;
ಕನ್ನಡ ನೆಲ ಜಲ ಸಮೃದ್ಧಿಯ ಕಣ
ಚಿರಸುಖ–ಸಂಕಿರಣ!

೩

ಕನ್ನಡ ಜನ ಜಾಗೃತ ಜೀವನ
ದೀಪೋತ್ಸವದೀ ಸುದಿನ
ನವಕರ್ನಾಟಕ ರಾಜ್ಯೋದಯ
ಸುಖಶಾಂತಿಯ ಸಮ್ಮಿಲನ!

೪

ನೂತನ ಕರ್ನಾಟಕ ಸುಖಸಾಧನ
ಒಕ್ಕೊರಲಿನ ಹೃದ್ಗಾನ
ಸ್ವಾರ್ಥತ್ಯಾಗದ ರಕ್ಷಾಬಂಧನ
ಶಿವಸಂಪದ ಸಂಪೂರ್ಣ!

೫

ಸುಜಲದ ಸುಫಲದ ಕರಿನಾಡಿನ ನೆಲ
ಕಂಡಿರಲಿಂದಿಗೆ ನವೋದಯ,
ಸಾರ್ಥಕವಾಯಿತು ಕನ್ನಡಿಗರ ತಪ
ಪ್ರಗತಿಗೆ ನಾಂದಿಯು ಈ ವಿಜಯ!

—ಬಾಳು ಬಿ. ಉಪಾಧ್ಯೆ

# ಭಾರತಾಂಬೆಯ ವರದಾನ

೧

ಸಿದ್ಧಿ ಸಾಧಿಸಿತೇಳು! ಮೇಲಕೆ
ಏಳು ಕನ್ನಡ ಕುವರಿಯೆ!
ನಿನ್ನ ಯುಗ-ಯುಗ ಯೋಗ ಫಲಿಸಿತು
ಕೇಳು ಕನ್ನಡದೊಡತಿಯೆ:

೨

ಮೆಚ್ಚಿ ಬಂದಿಹೆನೇಳು ಮಗಳೇ!
ಬೇಡು ಬಯಸಿದ ವರವನು;
ಕೆಚ್ಚು-ನೆಚ್ಚಿನ ವೀರ ಮಕ್ಕಳ
ತ್ಯಾಗ-ಸೇವೆಯ ಫಲವನು!

೩

ಎಂಥ ಪ್ರಕೃತಿಯ ಪುಣ್ಯಕೃತಿಯಿದೆ
ಮಗಳೆ ನಿನ್ನಯ ಬಳಿಯಲಿ!
ತೀರ್ಥ-ಕ್ಷೇತ್ರದ ಶುಚಿಯೆ ತುಂಬಿದೆ
ನೀನು ಆಡುವ ನುಡಿಯಲಿ!

೪

ಸೊಗದ ಮೊಗ್ಗೆಯೆ ಅರಳಿದಂತಿದೆ
ಚೆಲುವ ಕನ್ನಡ ಲತೆಯಲಿ
ಹರ್ಷವರ್ಷವೆ ಇಳೆಗೆ ಸುರಿದಿದೆ
ನಿನ್ನ ಪಾದದ ಬಳಿಯಲಿ!

೫

ಏಳು ಕನ್ನಡ ಭಾಗ್ಯದೇವಿಯೆ
ಏಳು, ಮಂಗಲ ಹಾಡುವೆ;
ಏಳು, ಎನ್ನಯ ಪ್ರೀತಿಪ್ರಾಣವೆ!
ಹಿರಿಯ ಹರಕೆಯ ನೀಡುವೆ!

೬

ಕೇಳು, ಎನ್ನಯ ಹೃದಯದೊಲುಮೆಯೆ,
ನಿನ್ನ ನಾನೊಳಗೂಡುವೆ!
ಜನ್ಮಜನ್ಮದಿ ನಿನ್ನ ಕೀರ್ತಿಯ
ಅಮರಗೀತವ ಹಾಡುವೆ!

೭

ವರದ ಫಲದಿಂದುಡಿಯ ತುಂಬುವೆ
ಶುಭದ ಕುಂಕುಮ ಹಚ್ಚುವೆ;
ಏಳು! ಕನ್ನಡ ಕುಲದ ದೇವಿಯೆ,
ಕರುಳಿನಾರುತಿ ಬೆಳಗುವೆ!

೮

ಆಳು ಕನ್ನಡ! ಬಾಳು ಕನ್ನಡ!
ಯುಗವೆ ನಿನಗಿದೆ ಪೀಠಿಕೆ,
ಏಳು ಮೇಲಕೆ; ಧರಿಸು ಕೊರಳಲಿ
ಹೊಸತು ಹೊಣೆಗಳ ಮಾಲಿಕೆ!

೯

ಬುದ್ಧ–ಬಸವರ, ಗಾಂಧಿ–ಕ್ರೈಸ್ತರ
ಬಲವೆ ನಿನಗಿದೆ ರಕ್ಷೆಯು
ಅಮರ ತತ್ವದ ಬೆಳಕಿನಲ್ಲಿದೆ
ನಾಡ ನಾಕದ ನಕ್ಷೆಯು!

೧೦

ನೋಡು, ನವಯುಗ ಸ್ವರ್ಣಸ್ವಪ್ನವೆ
ನಿನ್ನ ಭಾವದಿ ಮೂಡಿದೆ;
ಭವ್ಯ ಮಂದಿರದಲ್ಲಿ ಸೋಜ್ವಲ
ಬೆಳಕು ತುಂಬಿತೆ, ತುಳುಕಿದೆ!

೧೧

ತುಂಬಿ ನಿಂದಿದೆ ಗರ್ಭ ಗುಡಿಯಲಿ
ಯುಗದ ನೂತನ ಜೀವನ
ಎಲ್ಲಿ ನೋಡಿದರಲ್ಲಿ ಉದಯದ
ನವ್ಯ ದರ್ಶನ–ಚೇತನ!

೧೨

ಏಳು ಮಗಳೇ! ಎದೆಯ ಮುಗುಳೇ!
ಆಳಿ ಬಾಳಿರು ಚಂದದಿ!
ನಾಡ ನಡೆ–ನುಡಿ ಕಣ್ಣು ತುಂಬಲಿ
ಚಂದ ನಂದನದಂದದಿ!

೧೩

ಸಿದ್ಧಿ ಸಾಧಿಸಿತೇಳು! ಮೇಲಕೆ
ಏಳು! ಕನ್ನಡ ಕುವರಿಯೇ!
ನಿನ್ನ ಯುಗ–ಯುಗ ಯೋಗ ಫಲಿಸಿತು
ಏಳು ಕನ್ನಡದೊಡತಿಯೆ!

—ಬಿ. ಬಿ. ಹಿಂಗಮಿರೆ

# ಕನಸು ನನಸಾಯಿತು

ನುಚ್ಚುನೂರಾಗಿರ್ದ ಅಚ್ಚಕನ್ನಡನಾಡು
ಎಚ್ಚತ್ತು ಒಂದೆಡೆಗೆ ಸೇರ್ಪುದಿಂದು ||
ಮುಚ್ಚಿಮರೆಯಾಗಿರ್ದ ಕೆಚ್ಚುಕನ್ನಡತನದ
ಕಿಚ್ಚುಕದಿರುಗಳೆಲ್ಲ ತೋರ್ಪುವಿಂದು ||೧||

ಅಕ್ಕತಂಗಿಯರೆಲ್ಲ ಅಕ್ಕರದಿ ನಲಿವಾಗ
ಕಕ್ಕಸದಳುವನ್ನು ಅಳುತ್ತಿದ್ದೆ ತಾಯಿ ||
ಕಕ್ಕುಲತೆ ಕೈನೀಡಿ ತಕ್ಕೈಸಬರದೆ ನಾವ್
ಪುಕ್ಕಮಕ್ಕಳೆಲ್ಲ ಬಿಡಲಿಲ್ಲ ಬಾಯಿ ||೨||

ಹೇಸಿಮಕ್ಕಳಿಗಾಗಿ ರೋಷಗೊಂಡಿರೆ ನೀನು
ಆಶಯದ ಕನಸೊಂದ ಕಡೆಗೆ ಕಂಡೆ ||
ಕ್ಲೇಶಕೇಂಧನವಳಿದು ತೋಷತೃಪ್ತಿಯ ತಳೆದು
ಶೋಷಣೆಯ ಬಿಡುಗಡೆಯ ದಿನವ ಕಂಡೆ ||೩||

ಕನ್ನಡದ ನಾಡಿನೊಳು ಮಣ್ಣು ಹೊನ್ನಾಗಿಹುದು
ಕಣ್ಣು ಮನಗಳ ವಿಭವ ನೋಡು ||
ಕಿನ್ನರರು ಮೆಚ್ಚುವಾ ಗಾನ ಕಲೆಯಿಹುದಿಲ್ಲಿ
ಗಣ್ಯಕಲೆಗಾರರಿಗೆ ಚೈತನ್ಯ ಬೀಡು ||೪||

ಅಣ್ಣತಮ್ಮರೆ ಬನ್ನಿ, ಅಕ್ಕತಂಗಿಯರೆಲ್ಲ,
ಇನ್ನುಳಿದ ಹಿರಿಕಿರಿಯ ಕನ್ನಡಿಗರೆ ||
ಕನ್ನಡದ ಗುಡಿಯನ್ನು ಬಾನಿನಲಿ ಹಾರಿಸಲು
ಸಣ್ಣತನವನು ಬಿಟ್ಟು ಬನ್ನಿ ಚನ್ನಿಗರೆ ||೫||

ಆಶೆ ಆಮಿಷ ಬೇಡ, ಸ್ವಾರ್ಥನೀತಿಯು ಬೇಡ
ಅಸುನೀಗಿ ಸೇವೆಯನು ಸಲಿಸಬನ್ನಿ ||
ನಸುನಗುತ ಬರಮಾಡಿ ಹೊಸ ಬೆಳಕಿನೊಡನೆಮ್ಮ
ಮೈಸೂರ ರಾಜ್ಯಕ್ಕೆ ಜಯವ ತನ್ನಿ ||೬||

—ಮು. ಬ. ಕೋಠಿವಾಲೆ

## ನಾಡು ಒಂದಾಗುತ್ತಿದೆ

೧

ಕೇಳಿ, ಕನ್ನಡ ನಾಡ ಮಕ್ಕಳೆ!
ಭೇರಿಯದೊ ಮೊಳಗುತ್ತಿದೆ!
ಏಳಿರೈ, ಎದ್ದೇಳಿ! ಕನ್ನಡ-
ನಾಡು ಒಂದಾಗುತ್ತಿದೆ!

೨

ವರುಷವರುಷಗಳಿಂದ ಬಯಸಿದ
ಬಯಕೆ ಕೈಗೂಡುತ್ತಿದೆ;
ಬಂಧು-ಬಾಂಧವರೊಂದುಗೂಡಿರಿ,
ಪ್ರಗತಿಪಥವಿದೊ ಮುಂದಿದೆ!

೩

ಹುರುಪು ಹುಮ್ಮಸ ತುಂಬಿ ತುಳುಕಲಿ
ಕನ್ನಡದ ಜನಮನದೊಳು!
ಶಿರವ ಬಾಗಲಿ ಕರವ ಮುಗಿಯುತ
ಕನ್ನಡಮ್ಮನ ಅಡಿಯೊಳು!

೪

ಎನಿತೊ ಯುಗಗಳ ಕಳೆದ ನಾಡಿದು,
ಸಂಸ್ಕೃತಿಯು ನೆಲೆವೀಡಿದು
ರಾಜ್ಯಸಾಮ್ರಾಜ್ಯಗಳ ಕಟ್ಟಿದ
ಧೀರ ವೀರರ ಬೀಡಿದು

೫

ಆದೊಡೆಮ್ಮಯ ಗೆಯ್ಮೆ-ಹಿರಿಮೆಗ-
ಳೆಮ್ಮ ಹಿಂದಿನ ಕೃತಿಗಳು;
ಭಾರತಾಂಬೆಯ ಪಾದ ಕಮಲದೊ-
ಳರ್ಪಿಸಿಹ ವರಸುಮಗಳು!

ಪರರಿ ಭೇದವ ಗೈದರೆವ್ಮೊಳು
ಸ್ವಾರ್ಥ ನೀತಿಯ ಬಲೆಯೊಳು.
ಮುಂಕುಗವಿದಿರೆ ಮನಕೆ, ಸಾಧ್ಯವೆ
ಪ್ರಗತಿಪಥವನು ಕಾಣಲು ?

೬

ಘೋರ ತಮದೊಳಗಲೆದು ಧೀರರು
ಅಂಜದಳುಕದೆ ಕಷ್ಟಕೆ,
ಶೋಧಗೆಯ್ದರು ಪ್ರಗತಿಪಥವನು
ಭಾರತದ ಉದ್ಧಾರಕೆ !

೭

ಬಾಳು ಬೆಳಕನು ಕಾಣಲೆಂದಿರೆ
ಭೇದವೆಂದಿಗು ಸಲ್ಲದು !
ಭಾರತಾಂಬೆಯ ಸೇವೆಗಾಗಿಯೆ
ನಮ್ಮ ರಕ್ತದ ಹನಿಗಳು !

೮

" ಅಖಿಲ ಕನ್ನಡ ಕಣ್ಣಿನಲಿ ನಾವ್
ಕಂಡು ಭಾರತರೂಪವ
ಭಾರತಾಂಬೆಯ ಪೂಜೆಗೈಯುವ
ಹಚ್ಚಿ ಕನ್ನಡ ದೀಪವ ! "

೯

ಕೇಳಿ, ಕನ್ನಡ ನಾಡ ಮಕ್ಕಳೆ
ಭೇರಿಯುದೆ ವೊಳಗುತ್ತಿದೆ !
ಏಳಿರೈ, ಎದ್ದೇಳಿ ! ಕನ್ನಡ–
ನಾಡು ಒಂದಾಗುತ್ತಿದೆ !

— ದೇವೇಂದ್ರ ಬಸ್ತವಾಡ

# ಉದಯವಾಗಿದೆ ನಾಡು

'ಉದಯವಾಗಿದೆ ನಮ್ಮ ಚಲುವ ಕನ್ನಡ ನಾಡು'
ಹೊಸತು ಹೆಸರನು ಹೊತ್ತ ವೈಸಿರಿಯ ಹಿರಿನಾಡು!

ಭಾರತಾಂಬೆಯ ಮನೆಯ
ದೀಪ ಕನ್ನಡ ನಾಡು
ಅವಳ ಹಿರಿಮೆಯ ಜಗಕೆ
ಸಾರಿ ಹೇಳುವ ಹಾಡು ॥೧॥
ಉದಯವಾಗಿದೆ....

ಕಾವ್ಯ-ಕಲೆ-ಸಂಸ್ಕೃತಿಯ
ಹಿರಿಮೆ ಕಂಡಿಹ ನಾಡು
ಇಂದದರ ಹೊಸ ಮುಖವ
ತಾಳಿ ಬರುತಿದೆ ನೋಡು ॥೨॥
ಉದಯವಾಗಿದೆ....

ಪ್ರಕೃತಿಯೈಸಿರಿ ತುಂಬಿ
ತುಳುಕುತಿಹ ಸಿರಿನಾಡು
ಹೊಸ ಬೆಳಕ ಸ್ವಾಗತಿಸೆ
ಸಿದ್ಧವಾಗಿಹ ಬೀಡು ॥೩॥
ಉದಯವಾಗಿದೆ....

ಐಕ್ಯತೆಯ ಸಂಕಲ್ಪ
ಗೈದ ಈ ಹಿರಿನಾಡು
ಪ್ರಗತಿಪಥದಲಿ ನಡೆಯೆ
ಕೀರ್ತಿಗೆಲ್ಲಿಯ ಕೇಡು ॥೪॥
ಉದಯವಾಗಿದೆ....

—ಬಾಳೇಶ ಲಕ್ಷೆಟ್ಟಿ

# ಹೊಸ ಬೆಳಗು

೧

ಚೆನ್ನಾದ ನಾಡು ಎಲ್ಲೆಲ್ಲೋ ಎಂತೊ
ಬಿನ್ನಾಣ ತೊರೆದು ಕೈಬಿಟ್ಟು ಹೋದುದಾಯ್ತು
ಮುನೂರು ವರುಷ ಬಂಧನದಿ ಸಿಲುಕಿ
ಕಣ್ಣೀರ ಸುರಿಸಿ ರಕ್ತವನೆ ಹರಿಸಿದಾಯ್ತು

೨

ಸ್ವಾತಂತ್ರ್ಯ ಗಳಿಸಿ ಭಾರತವು ಇಂದು
ನವವರುಷವುರುಳಿ ಹೊಸ ಬಾಳ ಕಂಡುದಾಯ್ತು.
ಇದೆ ಕಾನೆ ಬಂತು ಕರುನಾಡ ಗೆಲ್ಮೆ
"ನವಂಬರ ಒಂದು" ಎದೆಂದು ಉಳಿವೊಲಾಯ್ತು !

೩

ಇಂದಿಗೆ ಬಂತು ಐಸಿರಿಯ ತಂತು
ಹಿಂದಿನ ಕವಿಗಳಭಿಮಾನ ತುಂಬಿ ಬಂತು
ಕರುನಾಡ ಸೇವೆಗೈಯುತಲೆ ಮಡಿದ
ವೀರೆಯರ, ವೀರರಾತ್ಮಕ್ಕೆ ಶಾಂತಿ ದೊರೆತು.

೪

ಬಂದೊದಗಿತಿಂದು ಅಂದಿನಾ ಸೊಬಗು
ನೃಪತುಂಗ ಕವಿಯಕಾಲದ ದಿವ್ಯ ಬೆಡಗು
ಹರಿಯಿತಿಂದು ಪರನುಡಿಯ ಪಿಡುಗು
ಆಗಿರಲು ನಮ್ಮ ಸವಿನುಡಿಗೆ ಹೊಸತು ಬೆಳಗು !

—ಎಸ್. ವ್ಹಿ. ಕಂಬಿ

## ಕನ್ನಡವಕ್ಕಿ

ಪಂಜರದ ಗಿಳಿ ಇಂದು ಹೊಸತನವನುಸುರುತಿದೆ
ತನ್ನದೇ ಬನದೊಂದು ಮರದಳಿರ ಮೇಲೆ;
ಹಣ್ಣುಂಡು, ಹಾಲೂಡಿ ಗರಿಗೆದರಿ ಗಗನಕ್ಕೆ
ಹಾರಲಿದೆ; ಹಾಡಲಿದೆ ನಾಡ ಜೀವನಲೀಲೆ!

—ಜಿ. ಆರ್. ಗೋಣಿ

# ಓ! ತಾಯಿ ಬಂದೆಯೇನು!

ಓ! ತಾಯಿ ಬಂದೆಯೇನು
  ಬಂದೆಯೇನಮ್ಮ
ಓ! ತಾಯಿ ಬಂದೆಯೇನು!

ಕಡುತೊಂದರೆಯ ತಿಂದರೂನು
ಬಲುದಿನದ ಮೇಲಾದರೂನು
  ಮೈತಾಳಿ ಬಂದೆಯಲ್ಲಾ!
ಹಾಗಾದರೇನು ಹೀಗಾದರೇನು?
ಹೇಗಾದರೂನು ಬಂದೆ ನೀನು!
  ಹೊಸಹುರುಪುತಂದೆಯಲ್ಲಾ!

ಏನಮ್ಮ ಎಷ್ಟು ಸೊರಗಿರುವೆ
ಮೈತುಂಬ ಬರಿಮೂಳೆ ಮೂಳೆ!
  ಕಾವೇರಿ ಗೋದೆಗಳ
  ಬೀದಿಬದಿಬೇಲಿಗಳ
ನಡುವೆ ಹಾಯುದವಳು!
  ನರ್ಮದೆಯ ನದಿಯಾಚೆ
ಮೈಯ ಚಾಚಿದವಳು
ಪೂರ್ವಪಶ್ಚಿಮ ಕಡಲನೀರಲಿ
ಕೈಗಳೆರಡನು ನಿತ್ಯಲೀಲೆಯಲಿ
  ಸಹಜ ತೊಳೆದವಳು!
ಎನಿತು ಕಿರಿದಾಗಿರುವೆ
  ಮೈಮುದ್ದಿಗೊಂಡು!
ಎನಿತು ಬಾಗಿರುವೆ
  ನಡ ಮುರಿದುಕೊಂಡು!

ನೀ ಹಳೆಯ ಕಾಲದ ಹೆಂಗಸಮ್ಮಾ!
ಮಕ್ಕಳೆಂದರೆ ನಿನಗೆ ಮೋಹವಮ್ಮಾ!

ಗಂಡು ಸಂತತಿಗಿಂತ ಹೆಣ್ಣೆ ಹೆಚ್ಚು !
ಅವರ ಗಂಡರ ಮನೆಯು ಸುಖದ ಹುಚ್ಚು !

ಹಿಂದೊಮ್ಮೆ ನಿನ್ನ ಪತಿ
ಇಮ್ಮಡಿಯ ಪುಲಕೇಶಿ
ಹರ್ಷವರ್ಧನನ ಸೋಲಿಸಿ
ಆಳುತಿರ್ದ ವಾತಾಪಿ
ತೊಂಬತ್ತು ತೊಂಬತ್ತು ಸಾಸಿರದ
ಮೂರು ಮಹಾರಾಷ್ಟ್ರಗಳನು !
ಅದರಲೊಂದು ಮಹಾರಾಷ್ಟ್ರವನ್ನು
ನೀನಂದೆ ಮಗಳ ಮದುವೆಯಲಿ
ಧಾರೆಯೆರೆದು ಕೊಡಲಿಲ್ಲವೇನು !

ನಮ್ಮಕ್ಕತಂಗಿಯರು
ನಮ್ಮ ಪ್ರೀತಿಗೆ ಪಾತ್ರರು !
ಆದರೂ
ಏತಕೇನೋ ಅವರು
ತಮ್ಮ ಮನೆಕಟ್ಟಲಿಕೆ
ತವರುಮನೆ ಕೆಡುಹಲಿಕೆ
ಯತ್ನ ಗೈಯುತಲಿಹರು !
ಹಿಂದಿನೊಲು ಮತ್ತಿಂದು
ಬೇಡಿ ಹಟ ಮಾಡುತಿಹರು !

ಖಂಡವಳ್ಳಿ (ಖಾಂದಿವ್ಲಿ) ಲೋಣವಳ್ಳಿ (ಲೋಣಾವಳ)
ಬೋರಿವಳ್ಳಿ (ಬೋರಿವ್ಲಿ) ಸಂಗವಳ್ಳಿ (ಸಾಂಗಲಿ)
ಎಲ್ಲ ಬಳುವಳಿ ಎಲ್ಲ ಬಳುವಳಿ !

ಪಳೆಯ ತಾಣ (ಫಲ್‌ಟಣ) ಮುಮ್ಮಣಿ (ಮುಂಬೈ)
ಪುಣಕನಗರ (ಪುಣೆ) ಗೋಪಕ (ಗೋವಾ)
ಎಲ್ಲ ಬಳುವಳಿ ಎಲ್ಲ ಬಳುವಳಿ !

ನಮ್ಮ ರಾಷ್ಟ್ರಕೂಟರಾ ಲಟ್ಟನೂರು (ಲಾತೂರ)
ಮಯೂರಖಿಂಡಿ (ಮೋರ್ಖಿಂಡಿ) ಸೇನಹಾರ (ಸಿನ್ನರ)
ನಮ್ಮ ಶಿಲಾಹಾರರಾ ಮುಮ್ಮಣಿ (ಮುಂಬೈ)
ಕರಹಾಟಕ (ಕರ್ಹಾಡ) ಕ್ಷುಲ್ಲಕಪುರ (ಕೊಲ್ಹಾಪೂರ)
ವಿರಿಂಜೆ (ವಿರಜ) ಕೂಡಲದಾಮುವಾಡ (ಕುರುಂದವಾಡ)
ಪನಿಹಾಳ (ಹನ್ಹಾಳ) ಹತ್ತಿಕಣಗಲಿ (ಹಾತಕಣಗಲಿ)
ಎಲ್ಲ ಬಳುವಳಿ ಎಲ್ಲ ಬಳುವಳಿ !

ಮರಾಠಿ ಮಗಳು ಪ್ರಥಮ ಪುತ್ರಿ
ಆಂಧ್ರವೆಣ್ಣು ದ್ವಿತೀಯ ಪುತ್ರಿ !
ತಮಿಳೆಯಕ್ಕ ತೃತೀಯ ಪುತ್ರಿ !
ಕೇರಳ ತರಳೆ ಕಿರಿಯ ಪುತ್ರಿ !
ಇವರಿಗಾಗಿ ಎಮಗೆ ಕತ್ರಿ !
ನಿನಗೆ ಚಿಂತೆ ಹಗಲು ರಾತ್ರಿ !
ಗಳಿಗೆಗೊಮ್ಮೆ ಗಳಿಗೆಗೊಮ್ಮೆ
ತವರಮನೆಗೆ ಬರುವರಿವರು
ಸರದಿಯಂತೆ ಸೆಳೆಯುವರು !
ತವರ ಮನೆಯ ಹೊನ್ನನೆಲ್ಲ
ತಮ್ಮ ಮನೆಗೆ ಎಳೆವರು !

‘ ಹೊಸಬರೇನಲ್ಲ,
ಹಳಬರಾಗಿಹರೆಲ್ಲ
ತವರ ಮನೆಯಂದೆತ್ತಿ ಕೊಡುವುದು ಸಾಕು,
ನಮ್ಮದು ನಮಗೆ ಬೇಕು !
ಹಿಂದೆ ಕೊಟ್ಟದ್ದು ಬಲು ಜಾಸ್ತಿಯಾಯ್ತು !
ಇನ್ನೂನು ಕೊಡುವೆನೆಂದರೆ ಆಸ್ತಿಯಾಯ್ತು !
ಅಮ್ಮಮ್ಮಾ
ದಯಮಾಡಿ ಸುಮ್ಮನಿರಮ್ಮಾ ! ’—
ಎಂದರೂನು

ನಾವಡ್ಡಬಂದರೂನು
ಅತ್ತುಕೊಡಿಸಿದೆಯಮ್ಮಾ
ನಮ್ಮ ಕೈಯುತಿರುವಿ:
ಅಕ್ಕಲಕೋಟ ಜತ್ತ ಸಿರೋಳ
ಸೊನ್ನಲಿಗೆ ಹಾತಕಣಗಿಲಾ
ಮಿರಜ ವೇಣ್ ಗಡಇಂಗ್ಲಜ!

ವಿಜಯನಗರಕಾಲಕೆ
ದ್ವಿತೀಯ ಪುತ್ರಿ ಲಗ್ನಕೆ
ಅಳಿಯನನ್ನು ಕರೆದು ಮತ್ತೆ
ಅರ್ಧರಾಜ್ಯ ಹರಿದು ಇತ್ತೆ
ನಮ್ಮ ಕೈಯಲುಳಿಯೆ ಪಟ್ಟೆ
ಮನೆಯನೆಲ್ಲ ದತ್ತು ಕೊಟ್ಟೆ!
ಇಷ್ಟಾದರೂನು
ಮೊನ್ನೆ ನೀನು
ಹಿರಿಹಂಪೆಯೊಡನೆ ಬಳ್ಳಾರಿ ಕೊಡಲು
ಓಡಾಡುತಿದ್ದೆ!
ನಾವೆಲ್ಲ ಬೈದಾಗ ಸುಮ್ಮನಾದೆ!
ಸಿಟ್ಟಾಗಿ,
ಗುಟ್ಟಾಗಿ
ಆಲೂರು ಆದವಾನಿ ರಾಯದುರ್ಗ
ಮೈಹರಿದು ಕೊಟ್ಟೆ!
ತೃಪ್ತಿಪಟ್ಟೆ!
ತಮಿಳಕ್ಕಗೆಂದು ನೀನಿತ್ತ ತಲಕಾಡು
ಅಂದೆ ತಿರುಗಿ ತಂದೆವು ನಾವು!
ಕೊಯಿಮುತ್ತೂರು ನೀಲಗಿರಿ
ಕೊಟ್ಟೆ ನೀನಿಂದು
ಇರಲೇಳು ಎಂದು
ಸುಮ್ಮನಾದೆವು ನಾವು!

ಕಿರಿಯವಳು ಕೇರಳೆಯು
ಆಕೆಗೇನನೂ ಕೊಟ್ಟಿಲ್ಲ
ನೀವಾದರೂನು
ಕೊಡಬಾರದೇನು
ಎನ್ನುತೆನ್ನುತಲೆ
ಕಣ್‌ಕಟ್ಟುಮಾಡಿ
ಕೊಟ್ಟೆ ಕಾಸರಗೋಡು
ನಮಗಷ್ಟೆ ಗೊತ್ತು ನಮ್ಮೆದೆಯ ಪಾಡು !
ಇನ್ನಾದರೂ ಸುಮ್ಮನಿರು ಮಹಾತಾಯಿ !
ಹೊಸಮೈಸೂರ ಸೊಸೆ
ಮನೆಗೆ ಬಂದಿಹಳು !
ಮನೆಕಾಯ್ದುಕೊಳ್ಳಲೇಳು !
ಸುಖದಿಂದ ಬಾಳಲವಳು !

—ಭುಜೇಂದ್ರ ಮಹಿಷವಾಡಿ

## ಬಾ ನಗುತ ಬಾ ತಾಯೆ !

ಬಾ ತಾಯೆ, ಬಾ ತಾಯೆ ನಗುನಗುತ ನಲ್ದಾಯೆ !
ಕೋಟಿ ಕೋಟಿ ಕಲರವ ಕಂಠಗಳ ಟಿಂಟಿಣಿಯು
ಮಧುರವಹ ಮೇಳದಲಿ ಸ್ವಾಗತಿಸಲಾಗಮಿಸಿ
ನಿಂದಿಹೆವು ನಗುಮೊಗದಿ ಹೊಸ ಬಾಳ ಮುದವೆರಸಿ !

ಓ ತಾಯೆ ! ಅದೆ ನೋಡು ನವಶತಕದಾದಿಯಾ
ನಿನ್ನಣುಗ ನೃಪತುಂಗ ! ಕನ್ನಡರ ಚೆನ್ನುಡಿಯು
ಆದಿಕವಿಯಾ ಪಂಪ ! ಕಾವ್ಯಕೆರೆದನು ತಂಪ !
ವಾಗ್ದೇವಿ ಭಾಂಡಾರವೊಡೆದ ಎಂಟೆದೆ ಬಂಟ
ಕನ್ನಡರ ಕವಿಕುಲಕೆ ಆ ರನ್ನ ಸಾಮ್ರಾಟ !
ಸಾವಗೆಡವರ ಮಿಥ್ಯ ಕಥೆಯು ಕೊಳೆಯನು ಹೂಳಿ
ಬಾಳ ಸಾರ್ಥಕ ಗೈದ ಸತ್ಯ ಶೋಧಕ ಹರಿಹರ !
“ ಸತ್ಯವೇ ಶಿವನೆಂದು, ರವಿಕಾಣುದುದ ಕಂಡು ”
ಅಷ್ಟ ದಿಗ್ಗಜಗಳಿಗು ಷಟ್ಪದಿಯ ಝೇಂಕಾರ
ಝೇಂಕರಿಸಿದ ಕವಿ ತಿಲಕ ರಾಘವಾಂಕ !
‘‘ ನವರಸದ ನವನೀತ ಕವಿಚೂತವನ ಚೈತ್ರ ”
ಹೃದಯವುಲ್ಲಸಗೊಳಿಸಿದವನಾತ ಲಕ್ಷ್ಮೀಶ !
“ ಕುವರವ್ಯಾಸನು ಹಾಡೆ ಕಲಿಯುಗವೆ ದ್ವಾಪರವು ! ”
ಎಂಬ ಕೀರ್ತಿಯ ಕುವರ ವ್ಯಾಸ !
ನಿನ್ನಣುಗರವರೆಲ್ಲ ನಿಂದಿಹರು ಸಾಲ್ಗೊಂಡು
ಪುಷ್ಪವರ್ಷವ ಗೈಯೆ ! ಅದೊ ನೋಡು ನಲ್ದಾಯೆ !
ಸುರಗಾನ ಸವಿ ನಿನದ ನಿನದಿಪುದು ಒಲವೆರೆತು,
ದೇವ ದುಂದುಭಿ ನಾದ ನಿನ್ನ ಸ್ವಾಗತಕಾಗಿ !
ಕೋಟಿ ಸೂರ್ಯರ ಪ್ರಭೆಯ ನೀಲಾಂಜನಗಳಿಲ್ಲಿ
ಬೆಳಗುತಿವೆ ಕನ್ನಡದ ಕುವರಿಯರ ಕರಕಮಲದಲದಿ.

ಕನ್ನಡರ ಕುಲವೆಲ್ಲ ಒಂದೆಂಬ ಒಲವಾಗೆ,
ಕನ್ನಡರ ಮನವೆಲ್ಲ ಕನ್ನಡದ ಮನವಾಗೆ,
ಕನ್ನಡರ ಬಹುದಿನದ ಹೆಬ್ಬಯಕೆ ನನಸಾಗೆ,
ವಿಜಯನಗರದ ವಿಜಯ ಧ್ವಜವು ಹಾರುವೊಲಾಗೆ
ಕನ್ನಡರ ಕಣ್ಮಣಿಯೆ, ಕನ್ನಡಿಗರುಸಿರೆ ಬಾ!
ಸಿರಿದೇವಿ ಸರಸತಿಯೆ, ಕನ್ನಡಾಂಬೆಯೆ ಬಾ!

* * * *

ಭಾರತಾಂಬೆಯ ಬಾಲಕಾಶ್ಮೀರ ಕನ್ನಡವು!
ಭಾರತಾಂಬೆಯ ಆತ್ಮ ತೇಜೋಜ ಕನ್ನಡವು!
ಆಧ್ಯಾತ್ಮ ಚಿಂತನೆಯ ಸಂಸಿದ್ಧಿ ಕನ್ನಡವು!
ವಿಜ್ಞಾನ ವಿಕಸನಕೆ ಚೈತನ್ಯ ಕನ್ನಡವು!–
ಎನ್ನುವೊಲು ಭಾರತಿಯು, ಬಾರಮ್ಮ ಬಾ ತಾಯೆ!
ನಿನ್ನ ಕಂದರ ಹರಸಿ ಮುದ ನೀಡು ನಲ್ದಾಯೆ!

—ಶಿವಲಿಂಗ ಅ. ಪದ್ಮಣ್ಣವರ

# ಕರುನಾಡ ಸಿರಿ

ಜಗದ ನಂದನ ವಿಪಿನ "ಭಾರತ"ವು ಅದರೊಳಿಹ
ನಗವೆನಿಪ ಸಹ್ಯಾದ್ರಿ ಘನ ಚೂತ ಮರದಿ
ಸೊಗ ಬೀರಿ, ಸಗ್ಗ ಸುಖ ಬಗೆ ದೋರಿ "ಕರ್ನಾಟ"
ನಗುತುಲಿವ ಕೋಕಿಲೆಯು ಸಲೆ ಮಧುರ ಸರದಿ

ಕನ್ನಡಾಂಬೆಯೆ, ನಿನ್ನ ಬಣ್ಣನೆಯ ಬಣ್ಣಿಸಲು
ಸಣ್ಣ ಮಗು– ಬುದ್ಧಿಯೊಳು, ಬರೆಯಲಾನರಿಯೆ
ಚಿನ್ನಮಂದಿರಕಿಟ್ಟ ರನ್ನಕಲಶದ ಪರಿಯೆ
ಉನ್ನತಿಯ ಶಿಖರೇರೆ ನಿನ್ನ ವರಸಿರಿಯೆ

ಗುಡುಗಿನೊಳು ಮಿಂಚಿಹುದು ಬೆಡಗಿನೊಳು ಕಲೆಯಿಹುದು
ನುಡಿಯೊಳಗೆ–ನಿನ್ನ, ಮೃದು ಮಾಧುರ್ಯವಿಹುದು
ಅಡಿಗಡಿಗೆ ಸುಖವಿಹುದು ಎಡೆ ಬಿಡದೆ ಯಶವಿಹುದು
ನಡೆ ನೋಟದಲಿ ಸಗಲ ಸೌಂದರ್ಯವಿಹುದು

ನಿನ್ನ ಭಕ್ತಿಯೆ ಬಂದು ಎನ್ನಂತರಂಗದೊಳು
ಕಿನ್ನರಿಯು ತಂತಿಯನು ಸಲೆ ಮೀಟುತಿಹುದು
ಕಣ್ಣು ಕುಣಿಸುತಲಿಹುದು ಮನವ ತಣಿಸುತಲಿಹುದು
ಬಣ್ಣಿಸಲು ನವ ಸ್ಫೂರ್ತಿ ತಾ ನೀಡುತಿಹುದು

* * *

ಅಕ್ಕರೆಯ ಬಾಲಕರು ಹುಕ್ಕ ಬುಕ್ಕರು ನಿನ್ನ
ಚೊಕ್ಕಟದಿ ಚರಣ ಸೇವೆಯ ಸಲ್ಲಿಸಿಹರು
ಚುಕ್ಕೆಗಳ ಬಳಗದೊಳು ಚಂದ್ರಮನು ಮೆರೆವಂತೆ
ಮಿಕ್ಕರೊಳು ನಿನ್ನ ವೈಭವ ಉಕ್ಕಿಸಿದರು

ಸುಖದ ವೃಷ್ಟಿಯೆ ಸುರಿಯೆ ಶಾಂತಿಗಂಗೆಯೇ ಹರಿದು
ಅಖಿಲರೊಳು ಆನಂದದುಸಿರಾಟ ಬೆರೆದು
ಮುಕುಳಗಳು ಬೀರಿದುವು ತವ ಕೀರ್ತಿಸೌರಭವ
ಅಕಳಂಕ ಸಿರಿನಾಡ ಬನಗಳಲಿ ಬಿರಿದು

ಮೂಡುತಿರೆ ಜ್ಞಾನರವಿ ಅಜ್ಞಾನತಮ ಹರಿದು
ಪಾಡಿದುವು ಮಂಗಲವ ಪಕ್ಕಿ ಬಾಯ್ದೆರೆದು
ಮಾಡುತಿರೆ ವರ್ತಕರು ರನ್ನ ಮಾಣಿಕ ರಾಸಿ
ನೋಡಿದರು ಆಗಸದಿ ಸುರರು ಆಚ್ಚರಿದು

ಕಲೆಯು ನೆಲೆಯನು ಅರಿತು ಶಿಲೆಗೆ ಪ್ರಾಣವ ತುಂಬಿ
ನಿಲಿಸಿದರು "ಸಾಸಿವೆಯ ಗಣಪಾ"ದಿಗಳನು
ಚೆಲುವ ಗೊಮ್ಮಟಸ್ವಾಮಿ ಚೆನ್ನಕೇಶವರಾಯ
ನಲಿದೊಲಿದು ನೋಡಿದರು ನವ ಪ್ರತಿಮೆಗಳನು

* * *

ಇಂತಿರಲು ಅಸಮ ಸಿರಿ ಎಂತೊಮ್ಮೆ ವಿಘ್ನ ಅರಿ
ಮಾರ್ತಂಡನಿಗೆ ಗೃಹಣವಾವರಿಪ ತೆರದೋಳ್
ಸಂತಸದಿ ರಾಜ್ಯವನು ಆಳಿದರು ಕೆಲ ನೃಪರು
ಅಂತಿಮದ ನೃಪ 'ರಾಮರಾಯ' ನಾಳಿಕೆಯೊಳ್

ವೀರ ಪುತ್ರರ ಮೇಲೆ ವೈರಿ ದಳವಾಕ್ರಮಿಸಿ
ಘೋರ ಘನ ಕಾಳಗದ ಕಾಡ್ಗಿಚ್ಚಿನೊಳಗೆ
ಶೂರ ನರಕೇಸರಿಯು ಪ್ರಾಣವಾಹುತಿಯಾಗೆ
ಚೀರಾಟ ಚದುರಾಟ ಕನ್ನಡಿಗರೊಳಗೆ

ಕಲ್ಲೆದೆಯ ಶತ್ರುಗಳ ಕೋಲಾಹಲವ ಕಂಡು
ಅಲ್ಲಿಗಲ್ಲಿಗೆ ಬೆದರಿ ತಾಯ್ನಾಡ ದಲವು—
ನಿಲ್ಲದೋಡಿತು, ಅರರೆ ಚೆಲುವ ಕನ್ನಡ ನಾಡ—
ಸೊಲ್ಲಡಗಿದಂತಾಯ್ತು, ಅರಿಗಾಯ್ತು ಗೆಲವು

ಮುತ್ತಿಕೊಂಡಿತು ಮೋಡ, ಸುತ್ತಿಕೊಂಡಿತು ತಿಮಿರ
ಎತ್ತ ನೋಡಿದೊಡತ್ತ ಕತ್ತಲೆಯೆ ಕವಿದು
ಬತ್ತಿದುವು ಸುಖ ಶಾಂತಿ ವಿಶ್ರಾಂತಿ ಕರ್ನಾಟ
ದುತ್ತುಂಗ ಭಾಗ್ಯರವಿ ಮರೆಯಾದನಂದು

ನಕ್ಷತ್ರಗಳ ನಡುವೆ ನಕ್ಕು ನಲಿಯುವ ದೇವಿ
ರಕ್ಷಿಸುವರಾರನ್ನು ಕಾಣದೆಯೆ ನೊಂದೆ
ಅಕ್ಷಿಗಳ ವಾರಿನಿಧಿ ಹರಿಸಿ ಪರದಾಸ್ಯತೆಯ
ಶಿಕ್ಷೆಯನು ಭೋಗಿಸುತ ಶೋಕದಲಿ ಬೆಂದೆ

* * *

ಮೂಡಲಾರನೆ ಮತ್ತೆ ಮುಳುಗಿ ಹೋದೊಡೆ ಸೂರ್ಯ
ಪಾಡಲಾರವೆ ಪಕ್ಷಿ ಗೂಡು ಸೇರಿದರೆ
ದೂಡಲಾಗದೆ ದುಃಖ? ಸ್ವಾತಂತ್ರ್ಯ ಸಾಮ್ರಾಜ್ಯ
ನೋಡಲಾರಳೆ ತಾಯಿ ಪರದಾಸ್ಯದೊಳಿರೆ?

ತಿರುಗಿ ಕಾಲದ ಚಕ್ರ ಇರುಳು ಜಾರಿತು ಮತ್ತೆ
ಪರಿಹರಿದು ಘನ ತಿಮಿರ ತಾನೆ ಬಯಲಾಯ್ತು
ಧರೆಯೊಳಗೆ ಭಾರತ ಸ್ವತಂತ್ರ ಸಾಮ್ರಾಜ್ಯವೆನೆ
ಅರುಣೋದಯದ ಚಿನ್ನೆ ತೋರಿ ಬೆಳಗಾಯ್ತು

ನವಸ್ಫೂರ್ತಿಯಿಂ ನರರು ಕಾರ್ಯದಲಿ ತೊಡಗಿದರು
ಜವದಿ ಗೂಡಿನೊಳಿರ್ಪ ಪಕ್ಷಿ ಕಣ್ದೆರೆದು
ಅವತರಿಸಿ ಕನ್ನಡದ ಭಾಗ್ಯರವಿ ಬಾರೆಂದು
ಸುವಿನಯದಿ ಕರೆಯುತೊಡಗಿದುವೆದ್ದು ನಲಿದು

ಸಿರಿಯ ಕರ್ನಾಟಕದ ಏಕೀಕರಣ ಕಾರ್ಯ
ಭರದಿ ನಡೆಸಿದರಾಗ ಕನ್ನಡಿಗರೆದ್ದು
ತರಣಿ ಉದಯಿಸಿ ಹೊನ್ನ ಕಿರಣ ತೂರುವ ಮುನ್ನ
ಅರರೆ! ವಿಸ್ಮಯ ವಿಘ್ನ! ಹೊಗೆ ಮಂಜು ಬಿದ್ದು

* * *

ದಶದಿಶೆಗೆ ಕಾರ್ಮೋಡ ಕವಿದು ಮೇಣ್ ಘನ ಮಂಜು
ಪಸರಿಸಿತು ಕನ್ನಡರಿಗಾಯ್ತು ಘನ ಚಿಂತೆ
ಹೊಸತೊಂದು ವಿಷಗಾಳಿ ಬೀಸಿತದು ಅಕಟಕಟ!
ರಸಭರಿತ ತರು ಲತೆಗಳೊಣಗಿ ಪೋಪಂತೆ

ಹೊತ್ತುತಿರೆ ದ್ವೇಷಾಗ್ನಿ ಸುತ್ತುತಿರೆ ಹೊಗೆ ವೈರ
ಹತ್ತಿಕೊಂಡಿತು ಬಿಡದೆ ಹೋರಾಟ ಜ್ವಾಲೆ
ಉತ್ತುಂಗ ನಾಡಸಿರಿ ಅನಲಗಾಹುತಿಯಾಗ
ಹತ್ತಿತದನೇನೆಂಬೆ! ದುರ್ಭಾಗ್ಯ ಲೀಲೆ

ಹಾರಿದುವು ಗುಂಡುಗಳು ಕಾರಿದುವು ಕೆಂಡವನು
ಹೀರಿದುವಸಂಖ್ಯಾತ ನರ ಪ್ರಾಣಿಗಳನು
ಚೀರಾಟ, ಬೋರಾಟ, ಹೋರಾಟ ನಡೆದಾಗ
ಜಾರಿದುವು ಸ್ವರ್ಣಮಯ ಮನೆ ಮಂದಿರಗಳು

ಚಿಮ್ಮಿ ರಕ್ತತುಷಾರ ಹೊಮ್ಮಿ ಹಾಹಾಕಾರ
ಉಮ್ಮಳದಿ ಕಂಬನಿಗಳುದುರತೊಡಗಿದುವು
ನಮ್ಮದಿಹುದೀ ಸೀಮೆ ನಿಮ್ಮದೆಲ್ಲಿಯದೆಂದು
ತಮ್ಮ ತಮ್ಮೊಳು ಪ್ರಾಂತ ಕದನ ಹೂಡಿದುವು

* * *

ಉಡುರಾಜ ನಂದದಿಂಗಡಲ ಕಾಂತಿಯು ಬೀರ್ವ
ಕಡು ಚೆಲ್ವ ಕನ್ನಡಾಂಬೆಯು ವೀರ ಕುವರ
ಪಡುವಣಲೆಯಾಗಿರ್ಪ ಗಡಿನಾಡ ಸೀಮೆಯದು
ಪೊಡವಿಯೊಳು ಪ್ರಖ್ಯಾತಿ ಪಡೆದ ರಣಧೀರ

ಅಚ್ಚು ಮೆಚ್ಚಿನ ಜಿಲ್ಹೆ ಕೆಚ್ಚೆದೆಯ ಬೆಳಗಾಂವಿ
ರೊಚ್ಚಿಗೆದ್ದತಿ ಕಾದು ಹೋರಾಟದೊಳಗೆ
ಅಚ್ಚರಿಯದೋರುತಮ್ಮನ ರಕ್ಷಿಸಿದನಹಹ
ನಿಚ್ಚ ವಧುವರನೆನಿಸಿ ವಿಜಯಸುಂದರಿಗೆ

ಆರಿ ಹೋಯಿತು ಜ್ವಾಲೆ ದೂರ ಹೋಯಿತು ದುಃಖ
ಹಾರಿದುವು ಹೊಗೆ ಮಂಜು ಕವಿದ ಕಾರ್ಮುಗಿಲು
ಏರಿದನು ಬಾನ್ದಳಕೆ ಕನ್ನಡದ ಭಾಗ್ಯ ರವಿ
ಬೀರಿದನು ಹೊಂಗಿರಣ ಹರಿಸಿ ಸಿರಿ ಹೊನಲು

ಅರಳಿದವು ಅಲರುಗಳು ಅಸಮ ಸಂತಸದಿಂದ
ಪರಿಮಳವ ಬೀರಿದುವು ಕನ್ನಡದ ಕೀರ್ತಿ
ಸರಸ ಕರ್ನಾಟಕದ ಏಕೀಕರಣವಾಗಿ
ಹರುಷವಾಂತಳು ಇಂದ್ರನೀಲಮಣಿ ಮೂರ್ತಿ

ಪೂರ್ವ ಪುಣ್ಯದ ಲತೆಯು ಫಲಿಸಿದಂದದಿ ನಾಲ್ಕು-
ನೂರ್ವರುಷಗಳ ಪರರ ದಾಸ್ಯತೆಯನಳಿದು
ಊರ್ವಿಯೊಳು ಸ್ವಾತಂತ್ರ್ಯ ಪಡೆದೆ ಕನ್ನಡದೇವಿ
ವೀರ್ವಂತೆ ಪರಸಿರಿಯು ತವಸಿರಿಯು ಮೆರೆದು

* * *

ಬನ್ನಿ ಕರ್ನಾಟಕದ ಕೆಚ್ಚೆದೆಯ ವೀರರೈ-
ತನ್ನಿ ನಾಡಿನ ರಚನೆ ಮತ್ತೆ ಮಾಡೋಣ
ಕನ್ನಡಮ್ಮನ ಚರಣ ಸೇವೆ ಗೈಯಲು ಬೇಗ
ಅಣ್ಣ ತಂಗಿಯರೆಲ್ಲ ಒಂದುಗೂಡೋಣ

ಸುಖವೃಷ್ಟಿ ಸುರಿಸೋಣ ಶಾಂತಿಸುಧೆ ಹರಿಸೋಣ
ಸಕಲರಿಗೆ ಸಂತೋಷ ಉಣಿಸಿ ತಣಿಸೋಣ
ಅಖಿಲೇಶಗೆರಗಿ ಬೇಡೋಣ ತಾಯಿಯು ವಿಭವ-
ಶಿಖರೇರಿ ಚಿರ ಬಾಳಲೆಂದು ಸ್ಮರಿಸೋಣ

ಏರಿಸುತ ನಭದಲ್ಲಿ ಕನ್ನಡದ ಬಾವುಟವ
ಹಾರಿಸುತ ಪ್ರಣಿಪಾತ ಮಾಡುವಾ ಬನ್ನಿ
ವೀರ ಮಾತೆಯ ಯಶೋಗಾನ ಪಾಡುತ ನಾಡ
ಸಾರ ಸೇವೆಗೆ ಪ್ರಾಣ ನೀಡುವಾ ಬನ್ನಿ

ಜಯತು ಚಂದಿರವದನೆ ಜಯತು ಸದ್ಗುಣಸದನೆ
ಜಯತು ಕಾರುಣ್ಯನಿಧಿ ಸೌಂದರಾಭರಣೆ
ಜಯತು ಕನ್ನಡ ಜನನಿ ತವ ಪಾದಪಂಕಜಕೆ
ನಯದಿಂದ ನಮಿಸುವರ ರಕ್ಷಿಸಾ ನೀನೆ!

—ಅಕ್ಕಾತಾಯಿ ತೇಜಗೌಡಾ ಪಾಟೀಲ

# ಪೂರ್ವಸ್ಫೂರ್ತಿ

ನಿಂದು ನೋಡಿದಳೊಮ್ಮೆ ಉಸಿರೆಳೆದು ಕನ್ನಡತಿ
ಯೋಚನೆಯ ಮಂದಿರದ ಮಹಡಿಯೇರಿ;
ಸ್ಮೃತಿಯ ಸಾಗರದಲ್ಲಿ ಭಾವನೆಯ ವೀಚಿಗಳು
ನುಗ್ಗಿದವು, ನುಸುಳಿದವು ತೂರಿ, ಹಾರಿ!

"ಎನಿತು ಕೊರಗುವಿಯಲ್ಲ! ಎನಿತು ಮರುಗುವಿಯಲ್ಲ,
ನಿನ್ನ ಮರುಕದ ದನಿಯ ಕೇಳ್ವರಾರು ?
ದೇವರಿಲ್ಲದ ಹಾಳು ದೇಗುಲದ ಗಂಟೆಯನು
ಬಡಿದು, ನಮಿಸಲು ವರವನೀವರಾರು ?

ಅಕ್ಕಪಕ್ಕದ ನಿನ್ನ ಬಂಧು- ಬಾಂಧವರೆಲ್ಲ
ತುಪ್ಪಸಕ್ಕರೆಯಲ್ಲಿ ಕೈದೊಳೆವರು !
ದುಕ್ಕ ದುಗುಡಗಳೆಲ್ಲ ನಿನ್ನ ಪಾಲಿನ ಸೊತ್ತು
ಕೋಟಿ ಕೀಟಲೆಯವರು ಕೊಡುತಲಿಹರು !

ಭಾರತದ ಮಣಿಮುಕುಟ ಕ್ಷಾತ್ರಕುಲ ಸಾಮ್ರಾಟ
ಪುಲಿಕೇಶಿವಂಶಜನು ನೀನಿರುತಿರೆ
ಆ ಕೆಚ್ಚು ನಿಮ್ಮವರ ನರನಾಡಿಗಳಲಿಳಿದು
ಕುದಿದೇಳೆ, ರಣಕಂಜಿ ಓಡಿ ಬಹರೆ ?

ಎದ್ದೇಳು ! ಹ್ಞೂ ಏಳು ! ಸಮರಕಹಳೆಯ ಕೊಳ್ಳು
ಊದುತೂದುತ ರಣಕೆ ಹೊರಡಲೇಳು !
ಕರುಳ ಮಿಂಚಿನ ದೀಪವುರಿಸಲಿಕೆ ಮನೆಮನೆಗೆ,
ಮುರಿದ ನಾಡನು ಮತ್ತೆ ಕಟ್ಟಲೇಳು ! "

ಓ ! ಅಮ್ಮ , ಕೇಳಿದೆನು ನಿನ್ನ ಸಿಡಿಲಿನ ನುಡಿಯ
ಸಾಕಮ್ಮ ಸಾಕಿನ್ನು; ರಣಕೆ ನಡೆದೆ !
ಕನ್ನಡದ ಸಿರಿಗುಡಿಯ ಕಟ್ಟಿ, ಕಳಸವನಿಡದೆ
ನಿನಗೆ ಮೊಗದೋರೆನಿದೊ ! ನಡೆದೆ ನಡೆದೆ !

— ಈಶ್ವರ ಹಿರೇನಂದಿಹಳ್ಳಿ

# ಬೆಳಗಾಂವಿಯ ಹಂಬಲ

೧

ಕನ್ನಡ-ತಾಯಿಯೆ ! ನಲ್ನುಡಿದಾಯಿಯೆ !
ನಿನ್ನೆದೆವಾಲನು ಮನದಣಿ ಕುಡಿಯುತ
ನಿನ್ನಂಗದ ಲತೆಗರಳಿದ ಪೂವಾನಿರುವೆನು ತಿಳಿಯಮ್ಮ !
ನಿನ್ನಯ ಸವಿನುಡಿ-ನಡೆಯನು ಕಲಿಯುತ
ನಿನ್ನಯ ಸಮತೆಯು ಮಮತೆಯೊಳಲೆಯುತ
ನಿನ್ನವನೆಂಬಭಿಮಾನವು ಎನ್ನೊಳು ನಾಟ್ಯವನಾಡುವದು!

೨

ನಿನ್ನವನಲ್ಲೆಂದರಿಗಳು ನನ್ನನು
ಬನ್ನದೊಳೆಳೆಯುತ ಬೈಗಳ ತೂರುತ
ಅನ್ಯಾಯದ ಪಥಕೆಳೆಯುವ ದಿಟ್ಟಿಯು ಭೀಕರವಾಗಿಹುದು!
ಕನ್ನಡ ಕುಣಿತದ–ಮಣಿತದ-ಭಂಗಿಯು
ಎನ್ನಯ ಮನವನು ಸೆಳೆಯುತಲಿರುವದು
ನನ್ನಯ ಹಿಂದಣ ಚರಿತೆಯನೋದಲು, ಕನ್ನಡಿಗನೆ ನಾನು !

೩

ಕ್ಷಾತ್ರರ ಚಿತ್ತವು ಸಿಡಿಮಿಡಿಗೊಳ್ಳುತ
ಸುತ್ತಲು ಮುತ್ತುತ ಕೋಲನು ತಿರುವುತ
ತತ್ತರಿಸುತ್ತಿದೆ ಕನ್ನಡ ಬಲವನು ! ಎತ್ತಣ ಕಾಟವಿದು ?
ತತ್ವದ ಬೆಳಕಿನೊಳೆಸೆಯುವ ಗಾಂಧಿಯು
ಸತ್ಯದ ಸಾಕ್ಷಾತ್ಕಾರವನೊರೆಯುತ
ವ್ಯತ್ಯುವಿಗಳುಕದೆ ನಿನ್ನೊಳು ಬೆರೆಯುವ ಹಾದಿಯನೀಕ್ಷಿಸುವೆ !

೪

ಕರುನಾಡೇಕೀಕರಣದ ಸಮಯಕೆ
ಬರುವೆನು ಭಾಗ್ಯದ ಕನ್ನಡ ನಾಡಿಗೆ
ಕರೆಕರೆದಪ್ಪುತ ಮುದ್ದಿಸಿ-ಆಡಿಸಿ- ಹಾಡಿಸಿ ತಣಿಸಮ್ಮ !
ನರಕಚತುರ್ದಶಿ ನೆನಹಿನೊಳುಳಿಯಲಿ !
ಮೆರೆಯಲಿ ನವಕರ್ನಾಟಕ ಬಾವುಟ !
ಚಿರವಾಗೆಸೆಯಲಿ ಸೋಲನ್ನರಿಯದ ಶಕ್ತಿಯು ನಾಡಿನಲಿ !!

೫

ಭಯವನು ಬಿಸುಟುತ, ನಿರ್ಭಯರಾಗುತ
ಜಯ ಜಯಕಾರದಿ ಮುಳುಮುಳುಗೇಳುತ
ಜಯಕರ್ನಾಟಕವೆಂಬೀ ಮಂತ್ರದ ನಾಂದಿಯ ಹಾಡೋಣ !
ಜಯದುದ್ಗಾರವು ದಶದಿಶೆ ತುಂಬಲು
ಜಯರವಿ ಕನ್ನಡ ಬಾನೊಳಗುದಯಿಸಿ
ಜಯಜಯ ಕನ್ನಡದನುರತಿಗೊಲಿಯುತ, ಮೂಮುಳೆಗರೆಯುವನು!!

—ಸಿ. ಬಾ. ಕಾಡಣ್ಣವರ

# ಬೆಳಗಾಂವಿನಾಡ ನೆಲ

೧

ಬೆಳಗಾಂವಿ ನಾಡನೆಲ
ಕಾಳಗದ ಕಣವಾಯ್ತು !
ಹೋರಾಟವೇ ಜನರ ಉಸಿರಾಯಿತೆ !
ಶಾಹಿ, ರಾಯರ ಆಳ್ಕೆ
ಕಂಡ ನಾಡಿನ ಬಾಳ್ಕೆ
ಘರ್ಷಣದ ತಳ್ಕೆಯಲಿ ಸಣ್ಣಾಯಿತೆ !

೨

ಬೆಳಗಾಂವಿ ಜನಪದದ
ಕಲ್ಪನೆಯ ಕರತಲದ
ಜಲಧಿಯಿಂದುದಿಸಿದಾ ಬಸದಿಕಮಲ
ತುಂಬಿಗಳ ಸಂಗದಲಿ
ಇರಬಯಸಿ ರಂಗಿನಲಿ,
ಕೀಟಗಳ ಕಾಟವನು ಸಹಿಸಿತಲ್ಲ !

೩

ಸುತ್ತೆಲ್ಲ ತಿಳಿಜಲವು;
ನಡುವಿರುವ ಗೋಡೆ ಬಹು
ಭದ್ರವಹ ಚಿತ್ತರದ ಕೋಟೆಯಿಹುದು !
ಬೆಳಗಾಂವಿಯಾ ಬಲವ,
ಸ್ವೈರಣೆಯದೀ ನಿಲವ
ಬಿದ್ದ ಕಲ್ಲೊ ಹಾಡಿ ಹೇಳುತಿಹುದು !

೪

ಕನ್ನಡಿಗರಾಳಿದರು
ಕನ್ನಡರು ಬಾಳಿಹರು
ಇಂದು ಅಳಿಯುವುದುಂಟೆ ನಮ್ಮಕುಲವು?

ಶಾಹಿ–ಶೈವರು–ಹಿಂದು–
ಗೋವಾನಿ–ಗುರ್ಜರರು–
ಮಹಮದೀಯರು ಕೂಡಿ ಇದ್ದ ಕುಲವು !

೫

ಮಲಗಲಿಕೆ ಕಟ್ಟಿಯನು
ಕೊಟ್ಟವರ ‘ ಮನೆನಂದೆ ’
ಎನ್ನುವರ ಬಗೆಗೇನು ಹೇಳಬೇಕು ?
ನ್ಯಾಯನಿಷ್ಠುರ ಮೇರು
ತಲೆಯೆತ್ತಿ ನಿಂತಿರಲು
ಹುಚ್ಚು ಗಾಳಿಗದೇಕೆ ಹೆದರಬೇಕು ?

೬

ಮನೆಯವರ ಮೆರೆವಣಿಗೆ
ಅತಿಥಿಗಳ ಉರಿವಣಿಗೆ–
ಯನು ಹಿಸುಕಿ ಮುನ್ನಡೆಯಿತಲ್ಲವೇನು ?
ನ್ಯಾಯ– ನೀತಿಯ ಅರುಣ
ನಾಡಿನೇಕೀಕರಣ–
ಸಂದೇಶವನು ಸಾರಿ ನಿಂದನೇನು !

೭

ಬೆಳಗಾಂವಿ ನಾಡವರು
ಕನ್ನಡದ ನಾಡವರು,
ಯಾವ ನಾಡವರಿಂಲಿ ಎಲ್ಲರೊಂದು
ನವ್ಯಗೀತವ ಕೇಳಿ
ದಿವ್ಯ ಭಾವವ ತಾಳಿ
ಬಾಳುವುದೆ ಭಾರತಕೆ ಅಮೃತಬಿಂದು !

—‘ ನಾ. ಕೃ. ’

# ಸ್ವಯಂವರ

ಕನ್ನಡ ತಾಯಿಯ ವರಪುತ್ರಿಯರೊಳಗೋರ್ವಳು ಬೆಳಗಾಂವಿ
ಇವಳ ಸೊಬಗಿಗೆ ಮೋಹಿಸಿ ಬಂದವರೆನಿತಿಹರೋ ಇಲ್ಲಿ !

ಮದುವೆಯ ಹೊತ್ತಿಗೆ ಸ್ಪರ್ಧೆಯೆ ನಡೆಯಿತು ಅವಳನು ವರಿಸಲಿಕೆ,
ಮಹಾರಾಷ್ಟ್ರದಾ ತರುಣ ಬಂದನಹ ಕೊಡುತಲೆ ಎಚ್ಚರಿಕೆ !

ಅವಳ ಸ್ವಯಂವರ ಮಂಟಪದಲ್ಲಿಯೊ ಜನಜಂಗುಳಿ ನೆರೆದು
ಆತುರದಿಂದಲಿ ನೋಡುತಲಿದ್ದಿತು ನಡೆವುದೇನೊ ಎಂದು !

ಕೈಯಲಿ ಮಾಲೆಯ ಹಿಡಿಯುತ ಮೆಲ್ಲನೆ ಬಳಕುತ ಈ ಬಾಲೆ
ಬಂದಳು ಎಡಬಲ ನೋಡತ ನಡೆದಳು ತಕ್ಕವರರಸುತಲೆ !

ಕನ್ನಡ ಯುವಕನ ಕಂಡಾಕ್ಷಣದಲಿ ಕೈಯ ಮುಂದೆ ಚಾಚಿ
ಮಾಲೆಯ ಹಾಕಿದಳೊಮ್ಮೆಯೆ ಹೆಮ್ಮೆಯ ಪಡುತಲಿ ನಸು ನಾಚಿ!

ಮಾಲೆಯ ಬಯಸಿದ ಪೋಲಿಗಳೆಲ್ಲಾ ಹೂಲಿಯನೆಬ್ಬಿಸುತ
ನಮಗೇಕಿಲ್ಲವೊ ಎಂದಬ್ಬರಿಸುತ ನಿಂತರು ಟೀಕಿಸುತ !

ಯಾರೇನಾಡಿದರವಳಿಗದೇನದು ? ಮಾತು ಜೊಳ್ಳು ಜೊಳ್ಳು
ಬಾಲ್ಯಸ್ನೇಹಿತನ ವರಿಸಿದುದಾಕೆಯ ತಪ್ಪೆನುವುದೆ ?—ಸುಳ್ಳು !

—ಎಂ. ಭಾಲಚಂದ್ರ

# ಆನಂದದ ಹಿಂದೆ

೧

ಋತುರಾಜ ಕಣ್ತೆರೆಯುತಿರೆ
ನಾಡ ನಂದನದಿ
ನಮಗೇನೋ ಆನಂದ
ತುಂಬುತಿದೆ ಮನದಿ !

೨

ಗೆಲುವಾದ ಚೆಲುವಾದ
ಜೀವನದ ಹಿಂದೆ
ಇರುವದೆಲ್ಲವು ಒಳಿತು
ಎಂದೆನ್ನಬಹುದೆ ?

೩

ತೀಕ್ಷ್ಣದೃಷ್ಟಿಯ ಹರಿಸಿ
ನೋಡಿದೊಡನಲ್ಲಿ ,
ಸೂಕ್ಷ್ಮ ಕೀಟಗೆಳೆನಿತೊ
ತೋಟದೆದೆಯಲ್ಲಿ !

೪

ಸೊಗದ ಸುಗಮತೆಗೆಡೆಯೆ
ದೊರೆಯುದಿರುವಂತೆ
ಮಾಡದಿರುವೊಲು ನೋಡಿ-
ಕೊಳುವುದರ ಚಿಂತೆ-

೫

ಮೆಲ್ಲನೇಳುವುದಕಟ
ಕನಸುಣಿಯ ಮನದಿ
ಋತುರಾಜ ಕಣ್ತೆರೆಯುತಿರೆ
ನಾಡ ನಂದನದಿ !

--ಆರ್. ಬಾಳ

# ಅಂತು ಇಂತು ಆಯ್ತು ನಾಡು!

ಅಂತಾದರು ಇಂತಾದರು ಎಂತಾದರು ಆಯ್ತು
ಹಸಿದೊಡಲಿಗೆ ತುಸು ದೊರೆತುದೆ ಪರಮಾನ್ನವಿದಾಯ್ತು!
ಕೊನೆಗಾದರು ಕನ್ನಡದೀ ನಾಡಾಯಿತೆ ಐಕ್ಯ?
ದೊರೆತಾಯಿತೆ ಕನ್ನಡ ಕುಲ ಒಂದಾಗುವ ಸೌಖ್ಯ?

ಒಳಗಿನ ಜನ ಒಳಗುಳಿಯದೆ ಹೊರಗುಳಿದುದು ಆಯ್ತು
ಕನ್ನಡ ನುಡಿಬಳ್ಳಿಯ ಕುಡಿ ಅನ್ನಿಗರದು ಆಯ್ತು!
ಅಂತಾದರು ಇಂತಾದರು ಅನ್ಯಾಯವೆ ಆಗಿ
ನಾಡಾಯಿತು ಎದ್ದವರಿಗೆ ಬಿದ್ದೇಳುತ ಬಾಗಿ!

ಬಸವಳಿಯುತ ಅಸುದೊರೆಯುವ ಓ! ಕಾಸರಗೋಡೆ,
ಹಿಂಡಗಲುತ ಹಳಹಳಿಸುವ ನಿನಗಿಂತಹ ಪಾಡೆ?
ಎಲ್ಲುಳಿದವೊ ಸೊಲ್ಲಾಪುರ ಆ ಅಕ್ಕಲಕೋಟೆ?
ಎತ್ತದ ಹೊರೆ ಹೊತ್ತವು ಕೊನೆಗನ್ನಿಗರಾ ಮೂಟೆ?

ಕರುಳುರಿದಿರ ಕಡುನಾಡಿನ ಜನಜಂಗುಳಿ ಕಂಠ
ಗುಡುಗುಡುಗಲು ನಡುಗಿತೊ ಗಡ ದೂರದ ವೈಕುಂಠ!
ಆ ಘೋಷಣೆ, ಧ್ವನಿಶೋಷಣೆ ಅರ್ಭಕನಾರಣ್ಯ-
ರೋದನದೊಲು ಹುಸಿಯಾಯಿತು ಕರೆ, ಕಾಣದೆ ಕಾರುಣ್ಯ!

ಹೊರುಗುಳಿಯಿತು ಒಳನಾಡಿನ ಒಡಹುಟ್ಟಿದ ಬಂಧು -
ಬಳಗೆಲ್ಲವು ಕಳವಳಿಸಿತು - ಆಡಳಿತಕೆ ಇಂದು!
ಅಂತಾದರು ಇಂತಾದರು ಎಂತಾದರು ಒಂದು
ಹೊಸಗನ್ನಡ ನಾಡಾಯಿತು ಹಸಗೆಟ್ಟರು ಇಂದು!

ಆದುದು ಆಯ್ತೇನೊ ನಿಜ, ನಾಡಿನ ಅಧಿಕಾರ –
ಯಾರಿಗೆ ?– ಕೆರೆ ನೀರಿನ ವರ ಪಡೆಯುವ ಧೈರ್ಯ ?
ಕಲಿತವರೂ ಬಲಿತವರೂ ತಾವೆನುವೊಲು ಗಣ್ಯ –
ಪುರುಷರೆ, ರಣಕಳಿದರೆ ಜನವುಳಿಯುವದೇ ಪುಣ್ಯ !

ತೊಗಲಿನ ಹದಗೆಡಿಸುವರೀ ಹೊಲೆಯರೆ ಹದಿನಾರು
ಎಣೆಯಿರದೊಲು ಒಳಬಣಗಳ ಕಟ್ಟುತಲೆ ಇಹರು !
ಮಾಡುವ ಜನ ಕೇಡಾಡದೆ ಈ ಮೋಡಿಗರಾಟ
ಮುರಿದರೆ ಸರಿ ಮೆರೆದೀತಿದು ಮೈಸೂರಿನ ತೋಟ !

—ಶ್ರೀಕಾಂತ ಶಮನೇವಾಡಿ

# ವಿಜಯಶ್ರೀ

೧

ಕನ್ನಡ ನಾಡಿನ ಭವ್ಯ ಗಗನದಲಿ
ನವ ಭಾಗ್ಯೋದಯವಾಗುತಿದೆ!
ಬಹ ಮನ್ವಂತರದಾಂತರ್ಯದ ನವ
ಚೇತನದುಸಿರನು ತೀವುತಿದೆ!
ತುಂಡಾಗಿಹ ನಾಡೊಂದಾಗುತಲಿದೆ
ಕನ್ನಡದೆದೆಯನು ಮಿಡಿಯುತಿದೆ
ಹೊಸನಾಡಿನ ಜನದೊಸಗೆಯ ಹಾಡನು
ಕಾಲವಿಹಂಗಮ ಹಾಡುತಿದೆ!

೨

ಕನ್ನಡ ಕೋಟೆಯ ಹೆಬ್ಬಾಗಿಲದಲಿ
ಜಯಭೇರಿಯು ತಾ ಮೊಳಗುತಿದೆ
ಜನಗಣಮನದಮಿತೋತ್ಸಾಹದ ಜಯ--
ಘೋಷಣೆ ಗಗನವ ಬಿರಿಯುತಿದೆ
"ಜಯ ಭುವನೇಶ್ವರಿ! ಜಯ ಭಾಗ್ಯೇಶ್ವರಿ!"
ಜಯವೆನ್ನಿರಿ ಕನ್ನಡ ಕುಲಕೆ!
"ಜಯ ಬನಶಂಕರಿ! ಜಯ ಜನಶಂಕರಿ!"
ಜಯವೆನ್ನಿರಿ ಕನ್ನಡ ನೆಲಕೆ!

೩

ವೀರಾಂಗನೆಯರ ಪಾದಧೂಳಿಯಲಿ
ಪಾವನವಾಗಿಹ ಗಡಿನಾಡು
ಧೀರ ಕನ್ನಡದ ರುದ್ರ ಚರಿತೆಯನು
ಬರೆದಿಹ ಕಿತ್ತೂರಿನ ನಾಡು!
ಬನಸಿರಿ ಹಸುರಿನ ಸೆರಗನು ಬೀಸಿಹ
ಸುಂದರ ಈ ಕುಂದರನಾಡು
ಸಹ್ಯಾದ್ರಿಯ ಮೊಲೆ ಹಾಲನ್ನುಂಡಿಹ
ಬೆಳಗಾಂವಿಯ ಭಾಗ್ಯದ ಬೀಡು!

೪

ಉತ್ತರದೆಸೆಯಲಿ ಎಚ್ಚರಗೊಂಡಿಹ
ಬಡಗಣ ಬಾಗಿಲು ಗಡಿನಾಡು
ಧೃಡನಿರ್ಧಾರದಿ ಗರುಡ ಕಾಪಿನಲಿ
ಗೆರೆಯನು ರಕ್ಷಿಪ ಎದೆ ನೋಡು !
ನಚ್ಚಿನ ನೆಲದಭಿಮಾನದ ಕೆಚ್ಚಿಗೆ
ಪ್ರಾಣವ ಪಣಕಿಟ್ಟಿಹ ಕೋಡು
ಉರಿಯನು ನುಂಗುತ ಸಿರಿಯನು ಮೆರೆಯುತ
ಧರೆಯನು ಬೆಳಗಿದೆ ಈ ನಾಡು.

೫

ಅಕ್ರಮದಿಂದನ್ಯಾಯವ ಬಗೆದರು
ನ್ಯಾಯವ ತಾ ಬಿಡದೆತ್ತಿಹುದು
ಅಹಿತರ ದಬ್ಬಾಳಿಕೆಯನ್ನೆದುರಿಸಿ
ಶಾಂತಿಯ ಬೀಜವ ಬಿತ್ತಿಹುದು !
ನಮ್ಮೀ ನಾಡನು ನೆಮ್ಮಿದ ಯವನರು
ಆಸುರ ಕೃತ್ಯವನೆಸಗಿದರು
ಹಾಲುಂಡಿಹ ಮೊಲೆಗೆಗಡನು ಬಗೆಯುತ
ಹಿಂಸೆಯ ಬೇಗೆಯನೆರೆದಿಹರು !

೬

ಅನ್ಯಾಯವನೆದುರಿಸಲೇ ಬೇಕು !
ಗಂಡೆದೆಯಿದ್ದರೆ ಎದ್ದೇಳಿ !
ನನ್ನಿಯ ರಾಜ್ಯಕೆ ನಮ್ಮಾತ್ಮದ ಬಲಿ
ಯಾದರು ಹೆದರದೆ ಎದ್ದೇಳಿ !
ಕನ್ನಡ ತಾಯಿಯ ಬಸಿರಲಿ ಉಸಿರನು
ಎಳೆದಿಹ ಜೀವವೆ ಬಾ ಮುಂದೆ
'ನಿನ್ನೀ ಜಿವನದನುಪಮ ಜ್ಯೋತಿಯ
ಅಮ್ಮನಿಗೆತ್ತಲು ಬೇಕೆಂದೆ !'

೭

ಕನ್ನಡ ಸಿರಿನುಡಿ ಕನ್ನಡಿಯಲ್ಲಿ
ತಾಯಿಯ ನಲ್ಮೊಗ ಕಾಣಲ್ಲಿ
ನಾಡಿನ ಒಡಲಿನ ಕರಳುಗಳೆಲ್ಲ
ಬೆರೆಯಲಿ ಕಿರಣೋದಯದಲ್ಲಿ
ಕನ್ನಡ ಮೊಲೆಹಾಲ್ ಕುಡಿದವರೆಲ್ಲ
ಹಿಂದಿನ ಹಿರಿಮೆಗೆ ದುಡಿಯೋಣ
ನಾಡಿನ ಸೇವೆಗೆ ಜನುಮದ ಕಾಣಿಕೆ
ಸಲ್ಲಿಸಿ ಘನತೆಯ ಬೆಳಗೋಣ !

೮

ಪ್ರಾಣವು ಕನ್ನಡ, ತ್ರಾಣವು ಕನ್ನಡ
ಕನ್ನಡದೊಳ್ ಭಾರತಪ್ರೀತಿ !
ಕನ್ನಡ ಸೇವೆಯೆ ಭಾರತ ಸೇವೆಯು
ಎನ್ನುತ ಮುನ್ನಡೆವುದೆ ನೀತಿ
ಏಳ್ ಕನ್ನಡ ಜನ ಬಾಳ್ ಕನ್ನಡ ಮನ
ತಾಳ್ ಕನ್ನಡದಭಿಮಾನ ಧನ !
ಸುಂದರವಾಗಲಿ ಬಂಧುರವಾಗಲಿ
ಕನ್ನಡ ಬಾಳಲಿ ಚಿರಂತನ !

೯

ಜಯ ಭುವನೇಶ್ವರಿ ಜಯ ಭಾಗ್ಯೇಶ್ವರಿ
ಜಯ ಜಯ ಭಾರತ ಭಾಗ್ಯಶ್ರೀ
ಜಯ ಶಿವಶಂಕರಿ, ಜಯ ಜನಶಂಕರಿ
ಜಯ ಜಯ ಕನ್ನಡ ವಿಜಯಶ್ರೀ!

—ಎಸ್. ಡಿ. ಇಂಚಲ

# ಕನ್ನಡತಿಯ ಹಾಡು

( ಜಾನಪದ ನಡಿಗೆಯಲ್ಲಿ )

ಒಂದಾದ ನಾಡಿನೊಳಗಽ
ಚಂದಾಗಿ ಬಾಳೋಣ |
ಒಂದಽ ಗುಟ್ಟಿನಲಿ ಸಾಗೋಣಽಽ

ಕನ್ನಡ ನಾಡಿನ | ಮುನ್ನಿನ ವೈಭವವೇನಽ
ಇನ್ನೊಮ್ಮೆ ಕಣ್ಣೊಳು ನೋಡೋಣಽಽ ||೧||

ಒಡೆದ ಕನ್ನಡಿಯನ್ನ | ಒಂದು ಮಾಡಿ ಕೊಟ್ಟಾರೇನಽ
ನಮ್ಮ ಮುಖ ನಾವಽ ನೋಡೋಣಽಽ ||೨||

ಚಂದ್ರಮನುದಯಕ್ಕೆ | ಅಂಬುಧಿ ಉಕ್ಕುವಂತೆ
ಕನ್ನಡರ ಮೈಯುಬ್ಬಿತೇನಽಽ ||೩||

ನವಂಬರ ಒಂದರಂದು | ನವ ಅಂಬರದಲ್ಲಿ ಅಂದು
ಕನ್ನಡ ರವಿ ಮೂಡಿದನೇನಽಽ ||೪||

ಭಾರತವು ಕನ್ನಡದೊಳಗೊಽ
ಕನ್ನಡವು ಭಾರತದೊಳಗೊ
ಭಾರತ–ಕನ್ನಡ ವಿಶ್ವದೊಳಗೊಽ ||೫||

'ಸಕಲ ಜೀವಾತ್ಮರಿಗೆ
ಲೇಸನೆ ಬಯಸುವ'
ವಿಶ್ವಬಾಂಧವ್ಯವ ಬೆಳೆಸೋಣ ಽಽ ||೬||

ಕರುನಾಡ ಹಣತೆಯೊಳಗೆ
ಭಾರತದ ಭಕ್ತಿಯನೆರೆದು
ಶ್ವಾತ್ಮಗೆ ಆರ ಯನೆತ್ತೋಣಽಽ ||೭||

—ವ್ಹಿ. ಕೆ. ಕರಡಿ

## ಹಿರಿತನವದೆಲ್ಲಿ ?

ಹಿರಿತನವದೆಲ್ಲಿಹುದು,
ತಿಳಿಯದಾಗಿಹುದಯ್ಯ !
ಜನಮನದ ಗೊಂದಲವು
ಅಳಿಯದಾಗಿಹುದಯ್ಯ !
ಧನದ ರಾಶಿಗಳಲ್ಲಿ
ಮನವು ಕೊಳೆತರು ಕೂಡ
ಜನರದನು ಘನವೆಂದು
ಮನ್ನಣೆಯ ಸಲಿಸುವರು.
ಬೆಳೆದ ಬಿರುದಿನ ಬಾಲ
ಕೆಲರ ಮಹಿಮೆಯ ಮೂಲ
ಹಲರ ಸೌಖ್ಯಕೆ ಶೂಲ !
ಹಿರಿತನದ ಹೊರಮೈಯು
ಜನರೆದುರು ಹೊಳೆಹೊಳೆದು
ಆದರ ಹಿಂದಣ ತತ್ವ
ಒಳಗಿರುವ ವರಸತ್ವ
ಅವರ ಮರೆಯಾಗಿಹುದು.
ಮೈಯೆ ಚೇತನವೆಂದು
ಭ್ರಮಿಸಿ ಬಳಲುವರವರು.
ಹಿರಿಯರನು ಕರೆಸುವರು
ಮೆರೆಸುವರು ಹರಸುವರು
ಅವರು ಹೇಳಿದುದನ್ನು
ಆದರದಿ ಕೇಳುವರು.
ಇದನೆ ಸಂತತ ಕಂಡು
ಮನದಲತಿ ಭ್ರಮೆಗೊಂಡು

 

ಇವು ದೊರೆಯದಿರಲವರು
ಎನಿತು ಒಣಗುವರಯ್ಯ!
ಎನಿತು ಗೊಣಗುವರಯ್ಯ!
* * *
ಮನ್ನಣೆಯು ಬೇಡಿದರೆ
ಸಿಗುವ ಸೊತ್ತೇನಯ್ಯ!
ತೊರೆದವಗೆ ದೊರೆಯುವದು
ದೊರಕಿಸಲು ಕೊರಗುವನ
ಮರುಗಿಸುತ ತೊರೆಯುವದು.
ನೆಳಲು ತನ್ನರಸುವನ
ಹೊರಳಿ ನೋಡುವದೇನು?
ಮರಳಿ ಮುಂದೋಟವನು
ನಿಲಿಸಿ ವರಿಸುವದೇನು?
ಪ್ರಭೆಯ ನೀಡುವ ರವಿಯು–
ನನುಸರಿಸೆ ನಾಯಿಯೊಲು
ತಾನೆ ಹಿಂಬಾಲಿಪುದು.
ಮಹಿಮೆ ಬೆಳಗುವ ಬೆಳಕು,
ಮನ್ನಣೆಯು ಬರಿ ನೆರಳು!
ಬೆಳಕಿನಾ ಒಡೆಯನಿಗೆ
ನೆಳಲು ಊಳಿಗದಾಳು.
ನೇಸರನ ವರಿಸದಲೆ
ನೆಳಲನರಸುನದೊಳಿತೆ?
* * *
ಹಿರಿತನವು ಅರಳಲಿಹ
ಹಿರಿಯ ಸುಮಸದ ಕಂಪು.
ಅಂತರಂಗದ ಮೊಗ್ಗು
ಅರಳಿ ಪರಿಮಳ ಬೀರೆ

ಪಾಮರರು ಸೇವಿಸಲು
ತಾವೆ ಸಾರುವರಲ್ಲಿ.
ಕೀರ್ತಿ ಸುಮನಗಳಂದು
ತಾವೆ ಸುರಿಯುವವಲ್ಲಿ.
ಬೆಳವುದನು ಬದಿಗಿರಿಸಿ
ಕೊಳೆತ ಕೊಳೆಯಲಿ ನಿಂತು
ಹೊಳೆವುದಕೆ ಹವಣಿಪುದು
ಒಳಿತೆಂತೆನುವದಯ್ಯ ?
ಹಿರಿಮೆ ಹೊನ್ನಿನ ಶೂಲ,
ಮಹಿಮೆ ಮುಳ್ಳಿನ ಮಾಲೆ,
ಮುದದಿ ಮುಡಿಯಲು ಬರುವ
ಮಲ್ಲಿಗೆಯ ಸರವಲ್ಲ.
ಕುಡಿಯ ಸುಡದಲೆ ಸೊಡರು
ಪ್ರಭೆಯ ಪಡೆಯುವದೇನು ?
ಇಳೆಯ ಬಸಿರಲಿ ನಿಲದೆ
ಬೀಜ ಬೆಳೆಯುವದೇನು ?
ಹೂ ಹಣ್ಣುಗಳ ತಳೆವ
ಸಿರಿಯ ಪಡೆಯುವದೇನು ?

* * *

ಮಹಿಮೆಯನು ಮೆರೆವುದಕೆ
ಮಹಿಮರಾ ಸೇವೆಯಲಿ
ಮೈಯ ಬೇಯಿಸಬೇಕು;
ಮನವ ಸವೆಯಿಸಬೇಕು.
ಕಿರಿಯ ತಾನಿಹೆನೆಂಬ
ಅರಿವು ಮೈದಾಳಿದವ
ಹಿರಿಯನಲಿ ಹಿರಿಯನಿಹ.

ನಾ ಹಿರಿಯ ತಾ ಹಿರಿಯ
ನೆಂದು ಸಾರುವರೆಲ್ಲ
ಹಿರಿಯರೆತ್ತಣರಯ್ಯ ?
ನಿನ್ನ ಶರಣರು ಹಿಂದೆ
ಇದನೆ ಅರುಹಿಲ್ಲವೆ ?
ಅವರ ಗುಡುಗಿನ ನುಡಿಯು
ಹಮ್ಮಿನಾ ಹುಮ್ಮಸದಿ
ತಿಳಿವಳಿದ ಕಿವಿಗಳನು
ತಲುಪದಾಗಿಹುದಯ್ಯ !
ಅವರ ಭ್ರಾಂತಿಯನಳಿಸಿ
ವಿನಯದಾ ಶಾಂತಿಯನು
ಹಿರಿತನದ ಕಾಂತಿಯನು
ಅದೆಂದು ನೀಡುವದಯ್ಯ ?
ಪ್ರಾಣನಾಥಾ !

—'ಚಿಚ್ಚಕೋರ'

## ಮಳೆ ಬಂತು

೧

ಮಳೆ ಬಂತು ಮಳೆ ಬಂತು
ಮಳೆ ಬಂತು ಕೊನೆಗೆ
ಬಾಂದಳದಿ ತೇಲುತಿಹ ಮೋಡಗಡಣವ ಕಂಡು
ಬಿರಿತ ನೆಲ ಬಾಯ್ಬಿಟ್ಟು ಹಳವಂಡವಡುತಿತ್ತು,
ಸಿಡಿವ ತಲೆ ಭೂತಾಯ ನಿಟ್ಟುಸಿರ ಮೃಗಜಲವ
ಬೆಂಬತ್ತಿ ಕಡು ಬಳಲಿ ಚಡಪಡಿಸುತಿತ್ತು
'If winter comes can spring be far behind?'
ಟಪ್ಪ ಟಪ ಟಪ್ಪ ಟಪ ಜೇನ ಹನಿ ಸುರಿದಂತೆ
ಮಳೆ ಬಂತು ಕೊನೆಗೆ
ಕಳೆ ಬಂತು ಕನ್ನಡಕೆ–ಕರುನಾಡಿಗೆ!
( ಕನ್ನಡ ನೆಲ ಕಸ್ತೂರಿ
ಅದಕೇತಕೆ ತುತ್ತೂರಿ ? )

೨

ಪರ್ಣಕುಟಿಯನು ತೊರೆದು ಹೊರಗೆ ಬಾ ದಧೀಚಿ
ಬೆನ್ನೆಲುವ ನೇಗಿಲಕೆ ಹೂಡಿರುವ ಸವ್ಯಸಾಚಿ!
ಬಂಜರದಿ ಬೆಳೆದಿರುವ ಹಳೆಯ ಕಸ ಕಿತ್ತು
ಹೊಸ ಮಳೆಯು ತಂದಿರುವ ಮುತ್ತುಗಳ ಬಿತ್ತು
" ಹುಲ್ಲುಲಿಗೋ ಚೆಲ್ಲಾಮುರಿಗೊ
ಹೋರಮಲ್ಲಯ್ಯಾ ಹುಲುಸ ಕೊಡಯ್ಯಾ "

೩

ಸತ್ತ ಎತ್ತಿನ ಕರುಳ ಕಿತ್ತು ತಿನುತಿದೆ ಹದ್ದು
ಹಾಕದಕೆ ಗುದ್ದು!
ನಿನ್ನ ಹೊಲದಂಚಿನಲಿ

ಕೊಕ್ಕಿನಲಿ ಕೊಕ್ಕಿಟ್ಟು ಮಲಗಿರುವ ಹಕ್ಕಿಗಳ
ಬಕ್ಕಳಿಸೆ ಹೊಂಚುತಿರೆ ಕರಿನಾಗರ,
ಕರುನಾಡ ಓ! ಚಿನ್ನ,
ನೀನಾಗು ಮುರಲೀಧರ!

೪

ಬಾಗಿಲಿಗೆ ಬಂದಿರುವ ಅಮ್ಮನನು ಕರೆಯಯ್ಯ
ಕಣ್ತುಂಬಿ ನಿಂದಿರುವ ಕಂಬನಿಯ ತೊಡೆಯಯ್ಯ!
ಎಳೆಹುಲ್ಲ ಮುಕಮಲ್ಲ ಹಾಸಿನಲಿ ನಡೆಸು
ಬಹುದಿನದ ಬಳಲಿಕೆಯ ನೀನಿಂದು ತಣಿಸು!
ಅವಳ ಪಾದದ ಧೂಳಿಕಣವೆಲ್ಲ ಸ್ವರ್ಣ;
ಆ ಮಂದಹಾಸದಲಿ ಮಿಂದ ಜೀವನ ಪೂರ್ಣ!

೫

ಮಳೆ ಬಂದು ನಿಂದಿಹುದು
ಮುಳೆ ಬಿಲ್ಲ ತಂದಿಹುದು
ಹಳ್ಳ ಹೊಳೆ ಹರಿಯುತಿವೆ ನಲುವಿನಲಿ ಉಕ್ಕಿ
ನರನರನ ನರನರದಿ ಬರಲು ಬಿಸಿನೆತ್ತರುಕ್ಕಿ
ನಾಂದಿ ಹಾಡಲಿ ನಭದಿ ಸೊಕ್ಕಿ ಕನ್ನಡವಕ್ಕಿ:
"ಕಟ್ಟುವೆವು ನಾವು ಹೊಸ ನಾಡೊಂದನು
ರಸದ ಬೀಡೊಂದನು!"

—ಪಶುಪತಿ

# ಬನ್ನಿ ಬನ್ನಿ !

ಓ ! ಬನ್ನಿ ಕನ್ನಡದ ಚಿನ್ನಗುವರರೆ ಬನ್ನಿ
ಚಿನ್ನ ರನ್ನವ ತರುವ ಬೇಗ ಬನ್ನಿ
ಮನದ ಸಂಕೋಚತೆಯ ಸೀಮೆಯಾಚೆಗೆ ನಿಂತು
ಒಂದಾಗಿ ಚಂದಾಗಿ ಇರುವ ಬನ್ನಿ !

ಸತ್ಯ ಶಮೆ ದಮೆ ಶಾಂತಿ ಸಮತೆ–ಮಮತೆಗಳೆಂಬ
ಶಸ್ತ್ರಗಳ ಧರಿಸೋಣ ಬೇಗ ಬನ್ನಿ
ನಮ್ಮ ನಾಡಿನ ಸ್ವರ್ಣ ರೇಷೆಯನು ರಕ್ಷಿಸಲು
ನೆರೆಯವರ ಹಾವಳಿಯ ತಡೆವ ಬನ್ನಿ !

ಗೆಲುವಿನುತ್ಸವಕಾಗಿ ಒಂದಡಿಯನಾದರೂ
ಮುಂದಿಡಲೆ ಬೇಕೆಂದು ನಂಬಿ ಬನ್ನಿ
ಜಯಕನ್ಯೆಯೊಡಗೂಡಿ ಕನ್ನಡಮ್ಮನ ಪದಕೆ
ನಮಿಸಿ ವರ ಪಡೆದು ಸೊಗಯಿಸುವ ಬನ್ನಿ !

ಕರಿನಾಡ ಮಣ್ಣಿನಲಿ ಹೊನ್ನರಾಶಿಯ ಬೆಳೆದು
ಕನ್ನಡದ ಕಣಜವನೆ ತುಂಬ ಬನ್ನಿ
ಅನ್ಯರಂಗುಲದನಿತು ನೆಲದಾಸೆಗೈಯದೆಯೆ
ನಮ್ಮ ಸಿರಿಯನೆ ಪೂಜಿಸೋಣ ಬನ್ನಿ !

ಭೂದೇವಿ ಬನದೇವಿ ವಾಗ್ದೇವಿ ಶ್ರೀದೇವಿ
ಸೌಂದರ್ಯದೇವಿಯರ ಅರ್ಚಿಸುವ ಬನ್ನಿ
ಕನ್ನಡಿಗರಧಿದೇವಿಯೊಳಗೆಲ್ಲ ದೈವಗಳ
ಕಂಡು ಪ್ರಾರ್ಥನೆಗೈಯಲಿಂದು ಬನ್ನಿ !

ಓ ! ಬನ್ನಿ ಕನ್ನಡದ ಚಿನ್ನಗುವರರೆ ಬನ್ನಿ
ಚಿನ್ನ ರನ್ನವ ತರುವ ಬೇಗ ಬನ್ನಿ
ಮನದ ಸಂಕೋಚತೆಯ ಸೀಮೆಯಾಚೆಗೆ ನಿಂತು
ಒಂದಾಗಿ ಚಂದಾಗಿ ಇರುವ ಬನ್ನಿ !

—'ಉಳುವೀಶ'

# ಚೈತನ್ಯಗೀತೆ

೧

ಮುಗಿಲು ಮಂಗಳಗೀತೆ ಮೊಳಗಿಸಿತು ಮೌನದಲಿ
ಸಪ್ತವರ್ಣದ ಸಪ್ತಸ್ವರರಂಗರಾಗದಲಿ!
ಕಲ್ಪವೃಕ್ಷದ ಕೆಳಗೆ ಕಟ್ಟಿದಂತಹ ಕನಸು
ಕಟ್ಟಡದ ರೂಪದಲಿ ಕಂಗೊಳಿಸುತಿದೆ—ನನಸು!
ಕನ್ನಡದ ಬಾನಿನಲಿ ಉದಯರವಿಗನುಸಾರ
ಮೂಡಿ ಬರುತಿಪೆ ನಾಡಿನಭ್ಯುದಯದವತಾರ!
ಹೊಂಗನಸಿನಿಂಗಡಲ ಸಂಗೀತಲೀಲೆಯಲಿ
ತಂಗಿಹುದು ಹೊಸ ನೌಕೆ ಅಭ್ಯುದಯದಂಚಿನಲಿ!

೨

ನಿನ್ನ ತಾಯಿಯ ಪೂಜೆಗೇಳು, ಓ! ಕನ್ನಡಿಗ,
ಏಳು ಕಂಕಣ ಕಟ್ಟು, ಏಳು ಈಗಿಂದೀಗ.
ನಾಡ ನಾಡಿಯ ಮಿಡಿವ ಚೈತನ್ಯ—ಗೀತೆಯನು
ತುಂಬಿಕೋ ಎದೆಯೊಳಗೆ ಕಲಿಪಾರ್ಥನೊಲು ನೀನು!
ಹೊಸತು ಎಲ್ಲವು ರಸವಿಹೀನವೆಂಬುವ ಹುಚ್ಚು
ಹಳೆಯದೆಲ್ಲವು ಹೊನ್ನು ಎನ್ನುವಂತಹ ಮೆಚ್ಚು
ಕೊಚ್ಚಿ ಹೋಗಲಿ ನಿನ್ನ ಎಚ್ಚರಿಕೆಯಂಬಿನಲಿ
ಅರಳಲೆಮ್ಮಯ ಬದುಕು ಭಾವಬಂಧುರತೆಯಲಿ!
ಹೊಸದರಲ್ಲಿಯು ರಸವು ಇರುವುದೆಂಬುದ ಮೆಚ್ಚಿ
ಹಳೆಯದೆಲ್ಲವು ಹೊನ್ನು ಅಲ್ಲವೆಂಬುದ ನೆಚ್ಚಿ
ಹೊಸ ತಿಳಿವು, ಹೊಸ ದೃಷ್ಟಿ ಹೊಸ ರೂಪರೇಷೆಯಲಿ
ಹೊಗರೇರಿ ಹೂವಾಗಿ ಹೊಸ ಆಸೆ ಮೂಡಿರಲಿ
ಸಂಪ್ರದಾಯದ ಶೂನ್ಯಸ್ವರ್ಗದಲಿ ಸತ್ತಿಹುದು
ನಮ್ಮ ಧಾರ್ಮಿಕ ದೃಷ್ಟಿ! ಕರುಣೆಯೋ ಬತ್ತಿಹುದು
ಗುಡಿಯ ಹುತ್ತಿನಲಡಗಿ ಹೆಡೆಯನಾಡಿಸಿ ಹಾವು,
ಅಂಧಶ್ರದ್ಧೆಯ ಮೇಲೆ ಕುಳಿತು ಕೊಡುತಿದೆ ಕಾವು!

ಇಂದಿನೀ ತಿಳಿವೆಳಕು ಇಳೆಗಿಳಿದು ಬರುತಿರಲು
ಹೊಸ ನಾಡ ಹೊಸ ಬಾಳ ಸಂದೇಶ ತರುತಿರಲು
ಭಾವಶನಿಸಂತಾನ ಬೆಳೆಯದೊಲು ಜೋಕೆ,
ನವಶಕ್ತಿಸಾಗರದಿ ತೇಲುತಿರೆ ನೌಕೆ !

೩

ಕನ್ನಡದ ಕವಿನೆಲದ ಕಸ್ತೂರಿ ಕಂಪಿನಲಿ
ಬೆಳೆದು ಬಂದವರೆಲ್ಲ ಬಾಂಧವರೆ ಹುಟ್ಟಿನಲಿ
ಎನ್ನುವಂತಹ ಭಾವ ಅರಳಲೆದೆಯೆದೆಯಲ್ಲಿ
ಅಂತರಂಗದ ಸಂತರಂಗಮಂಟಪದಲ್ಲಿ !
ಇದು ನವೋದಯ ಕಾಲ, ಕಲಿಪಾರ್ಥನೊಲು ನೀನು
ದಿಕ್ಕು ದಿಕ್ಕಿಗು ಎಸೆಯೊ ಚೈತನ್ಯ-ಬಾಣವನು !
ಜಾತಿ-ಮತ-ಪಂಥಗಳ ಕೋತಿಗಳನೀಡಾಡು
ಒಲುಮೆಯಂತಃಕರಣ ಫಲಿಸುವಂದದಿ ಮಾಡು !
ರವಿಕಿರಣಲೀಲೆಯಲಿ ನಳನಳಿಪ ಹೂವಿನೊಲು
ಕಿಲಕಿಲನೆ ನಗುತಿರಲಿ ರಸ ತುಂಬಿ ಈ ಬಾಳು !
ಇದು ನವೋದಯಕಾಲ, ಕಲಿಪಾರ್ಥನೊಲು ನೀನು
ದಿಕ್ಕು ದಿಕ್ಕಿಗು ಎಸೆಯೊ ಚೈತನ್ಯ-ಬಾಣವನು !
ಸದ್ಭಾವ, ಸಂಪ್ರೀತಿ, ಸದ್ಬುದ್ಧಿ, ಸಹಕಾರ
ಮಂತ್ರಿಮಂಡಲ ನಿನಗೆ-ಏಳು, ಓ ನವಧೀರ !

**—ಪರ್ವತರಾಜ ಪಾಟೀಲ**

## ಏಳು ಯುವಕನೆ !

ಏಳು ಯುವಕನೆ ಕಳೆದು ನಿದ್ದೆಯ
ಕೇಳು ವಿಜಯದ ಘೋಷಣ !
ನಮ್ಮ ನಾಡಿಂದೊಂದುಗೂಡಿರೆ
ಭಾರತಾಂಬೆಗೆ ಭೂಷಣ !

ನಾಡೇಳಿಗೆಗೆಂದು ಬೀಡನು
ಬಿಟ್ಟು, ಕಟ್ಟುತ ನಡುವನು
ದುಡಿದ ಹಿರಿಯರ ಹರಕೆ ಪಡೆಯುತ
ಕಾಯ್ದುಕೊಳ್ಳುವ ಗಡಿಯನು !

ಎಂದೊ ನೆನೆಸಿದ ಕನಸು ಇಂದಿಗೆ
ನನಸಿನೊಳು ಮೈಗೊಂಡಿದೆ;
ಅದಕೆ ಕಳೆಯನು ಬಳೆವ ಕಾರ್ಯಕೆ
ನಿನಗೆ ಕರೆಯನು ಕೊಡುತಿದೆ !

ಕನ್ನಡಮ್ಮನ ಉಡಿಯ ತುಂಬಿಸು
ನಿನ್ನ ಸೇವೆಯ ಸಲ್ಲಿಸಿ
ನಾಡು ನನ್ನದು ನುಡಿಯು ನನ್ನದು
ಗಡಿಯು ನನ್ನದು ಎನ್ನಿಸಿ !

ಏಳು ಬೇಗನೆ ಕೊಳ್ಳು ದೀಕ್ಷೆಯ
ಬೆಳೆಸಲೀ ಕರುನಾಡನು
ಆತ್ಮಬಲಿಯನು ತೆತ್ತ ಅಮರರ
ನೆನೆದು, ಬಯಸುತ ಜಸವನು !

ಶಿರವ ಬಾಗಿಸಿ, ಹಿರಿಯ ನಾಡಿನ
ಧ್ವಜವನೇರಿಸು ಬಾನಿಗೆ
ತಾಯ ಕೀರ್ತಿಯ ಸಾರುತಿರಲದು
ಸುತ್ತು ಹತ್ತೂ ದಿಕ್ಕಿಗೆ !

—ದೇವೇಂದ್ರಕುಮಾರ ಪಾಟೀಲ

# ಕನ್ನಡಿಗನೆ ಮುನ್ನಡೆಯೊ !

ಕನ್ನಡಿಗನೆ ಮುನ್ನಡೆಯೊ
ನೀ ನಾಡಿಗಾಗಿ ದುಡಿಯೊ!

೧

ಹೊಂಗನಸಿನ ಹೂಬಿಸಿಲು
ಕರುನಾಡೊಳು ಹರಡಿರಲು
ತಡಮಾಡುವೆ ನೀನೇಕೆ ?
ಒಡಗೂಡಿರೆ ಮನಬಯಕೆ
ನಿನಗೇತಕೆ ಈ ಮೌನ?
ಮಿಡಿ ಭವಿತವ್ಯದ ವೀಣಾ !

೨

ಆದ್ಯತೆಯಲಿ ನೀ ಬೆಳೆದು
ಹುಲುಜಾಡ್ಯದ ಮಂಜಳಿದು ,
ಹಳೆಗಾಲವು ಗತಿಸಿರಲು
ಗತವೈಭವ ನೆನಹಿನೊಳು,
ಕರುನಾಡನು ಶಿಂಗರಿಸು
ಹೊಸ ವಿಕ್ರಮವನೆ ಬರೆಸು !

೩

ಸೌಂದರ್ಯದ ಸಿರಿನಾಡು
ಈ ಕನ್ನಡ ಗಡಿನಾಡು
ಅಭಿಮಾನದ ನಿಧಿ ನೋಡು ;
ಅದನುಳಿಸಲು ಬಲ ನೀಡು !
ನುಡಿದಾಸ್ಯದ ದುಗುಡವನು
ತೊಡೆಯುವುದಕೆ ಬಾ ನೀನು !

೪

ಅಳಿದುಳಿದ ಶಿಲೆಯು ಸೊಲ್ಲು
ದನಿಯೆತ್ತಿ ಹೇಳುತಿಹುದು:
ತನು ಮುಡಿಪು ನಾಡಿಗಾಗಿ,
ಮನ ನಾಡ ಪ್ರಗತಿಗಾಗಿ
ಇಡುತೋಡು ನಾಡ ಕುವರ
ನೀನೇರು ಪ್ರಗತಿ ಶಿಖರ !

—ಪ್ರಕಾಶಲಿಂಗ ನಿಲುಗಲ್ಲ

# ಕಟ್ಟೋಣ ನಾಡು !

ಓ ! ದೇಶ-ಭಾಷೆ ಸಂಗ್ರಾಮದಲ್ಲಿ ಉಸಿರಿಟ್ಟುಕೊಂಡ ಶಿಶುವೆ,
ಹೊಸ ಬಾಳ ಬಗೆಗೆ ಜಸವನ್ನು ಕೋರು ನೀ ನಮ್ಮ ನಾಡಿನಸುವೆ !
ನವ ನಾಡ ನೆಲೆಯ ಕಲಿತನದ ಸೆಲೆಯು ಹೊರಹೊಮ್ಮಿ ಹರಿದುಬಂದು
ಕನ್ನಾಡ ನುಡಿಯು ಹಾಲ್ಗಡಲ ಸೇರಲದು ತಾನೆ ಸುಧೆಯು ಸಿಂದು!

ಸೌಂದರ್ಯದುಸಿರು ಸುಳಿಗಾಳಿಯಲ್ಲಿ ಸರಿಗಮದ ಸುತಿಯು ನುಡಿದು
ತಾಯಿಯೆಂಬುರಿನಲಿ ಭಕ್ತಿಭಾವದಲಿ ಹಾಡಲಿವೆಯು ಮಿಡಿದು !
ನಾಡವರ ಗೋಳು ಕಳೆದವರ ಬಾಳು ಕಳೆಗೊಳ್ಳುವಂತೆ ಗೈದು
ಐಕ್ಯತೆಯು ಪಥದಿ ಮುನ್ನಡೆದು ಹೊಸತು ಹಿರಿಯಾಸೆಯನ್ನು ಹಿಡಿದು

ಕನ್ನಡದ ಸೋದರರು-ಸೋದರಿಯರೊಡಗೂಡಿ ಕರುನಾಡ ನಾಡಿಮಿಡಿದು
ಕಟ್ಟೋಣ ನಾಡು ಬಾಂಧವ್ಯಲತೆಗೆ ಸುಖ-ಶಾಂತಿ ಸಲಿಲ ಸುರಿದು !
ಜನದಚಲ ಶಕ್ತಿ ಭಯಭಕ್ತಿಯಿಂದ ಕಣ್ದೆರೆವ ಭೂಮಿ ತಾಯಿ
ಕಂಡಾಳುಎದುರು ಚಿಗುರೆಲೆಯು ಹೊಗರು,ದಿನಗಳೆಯೆ ಹೂವು-ಕಾಯಿ!

ಕರುನಾಡ ಗುಡಿಯು ಹಿರಿ ಹೆಮ್ಮೆಯಿಂದ ಎತ್ತರದಿ ಹಾರುವಂತೆ
ಸಿರಿನಾಡ ನುಡಿಯು ಕನ್ನಡಿಯು ಬಲ ಪಡೆಯಬೇಕು ಅಂತೆ !
ದಿಕ್ತಟಗಳಲ್ಲಿ ಇನಿದನಿಯು ತಾನೆ ಧ್ವನಿಗೈಯುತಿರಲಿ ಸತತ ;
ಹೃತ್ಪ್ರಣತಿಯಲ್ಲಿ ಬೆಳಗಿಸಿದ ಜ್ಯೋತಿ ತೋರಿಸಲಿ ಪಥನ ನಿತ್ಯ !

—ಪೋತ ಅಪ್ಪಾಸಾಹೇಬ

# ನಾಡೊಳು ಉದಿಸಲಿ ಹೊಂಗಿರಣ !

‘ ಬಾರದು ಬಪ್ಪದು ಬಪ್ಪುದು ತಪ್ಪದು ’
ಅಣ್ಣನ ಅಮೃತವಾಣಿಯಿದು !
ಅಂದಿಗು ಇಂದಿಗು ಅಂತರವಿದ್ದರು
ಸತ್ಯಕೆ ಸಾವೆಂದಿಗು ಇರದು !

ಬೇಡಿಕೆ ಬಯಕೆಗಳೆಂದಿನವೇನೋ ,
ಬರಬೇಕೆಲ್ಲಕು ಶುಭಕಾಲ !
‘ ಸೈರಿಸಿ ಸೈರಿಸಿ, ದೊರೆಯುವುದೆಂ’ದರು
ಒದಗಿತು ಸೈರಣೆಗೀಗ ಫಲ !

ನಾಡೊಂದಾದರೆ ಹಿರಿಹಿರಿ ಹಿಗ್ಗೇ ?
ಪೂರೈಸಿತೆ ಈಗಲೆ ಕೊರತೆ ?
ಮೂಡಣ ಪಡುವಣ ಬಡಗಣ ತೆಂಕಣ-
ದಲಿ ಮೂಡಲಿ ಬಂಧುರ ಸಮತೆ !

ಕಟ್ಟಿದ ಕನ್ನಡ ಹೊಂದೇರೆಳೆಯಲು
ನೆರೆದ ಪರಸಿ ಕೈಗೂಡಿಸಲಿ !
‘ ಹರಹರ ಮಾದೇವ ’ ಎಂದರೆ ಸಾಲದು
ಮನಮನದೆಳೆ ಹುರಿಗೊಂಡಿರಲಿ !

ಬುದ್ಧಿಯ ಬೂಳಸ ಮನಸಿನ ಮಲಿನತೆ
ಹಳೆ ಕೊಳೆ ಪರೆಗಳ ಆವರಣ
ಕಳಚುತೆ ಕಳೆಯುತೆ ಈ ಶುಭದಿನದಲಿ
ನಾಡೊಳು ಉದಿಸಲಿ ಹೊಂಗಿರಣ !
ಜಯ ಜಯವೆನ್ನುವ ತೂರ್ಯಧ್ವನಿಯಲಿ
ದೊರೆಯಲಿ ಚೇತನ ಜೀವನಕೆ !
ಹಾರಲಿ ಏರಲಿ ಕನ್ನಡ ಬಾವುಟ
ಎತ್ತರದಲಿ ಎತ್ತರ ನಭಕೆ !

—ಬಸವರಾಜ ಮಾಗಿ

# ಕರಣದೇಕೀಕರಣ

೧

ಚೆನ್ನುಡಿಯ ಕರ್ನಾಟಕ ಗತ ವೈಭವದ ರಮ್ಯ ಚಿತ್ರ
ಕನ್ನಡದ ಘನ ಸಂಸ್ಕೃತಿಯು ವ್ಯಾಪಿಸಲ್ ಸರ್ವತ್ರ
ಉನ್ನತದಿ ಬೆಳ್ಗಸವಂ ಪೊಂದಿ ಬೆಳಗುವುದು ನಿತ್ಯ
ಚೆನ್ನ ನಡೆ-ನುಡಿಯಲ್ಲಿ ತೊಳಗುವದು ಸತ್ಯ!

೨

ವರುಷ ಸಹಸ್ರಾರು ಗತಿಸಿದರೂ ಕನ್ನಡದ ನೆಲದೊಳ್
ಕರಣವೊಂದಾಗದಿರೆ ಏಕೀಕರಣವೆಂತಹುದೋ ?
ಹರಹರಾ ಐಕ್ಯವಿಲ್ಲದ ಸೌಖ್ಯವೆಂತೊ ! ಅರಿಯೆನು ದೇವ !
ಕರುಣಿಸೈ ಕುಲಕೋಟಿ ಹೃದಯಕಲ್ಮಷ ತೊಳೆವ ವರವ !

೩

ಒಂದೆಡೆಗೆ ನಡೆವ ಅಧಿಕಾರಲಾಲಸೆಯೊಳನ್ಯಾಯ ! ಮತ್ತೆ
ಮಂದ ಜನವಿದೆಂಬ ನುಡಿಯು ಗಾಯ ! ಸಹಿಸದೀ ಜನತೆ!
ಬಂದಿಹುದು ಸರ್ವರಿಗು ಸಮಪಾಲು ಕನ್ನಡದ ಘನತೆ
ಸಂದೇಹಮಿದಕಿಲ್ಲ ಭಾರತಾಂಬೆಯೆ ನಮಗೆ ಸಾಕ್ಷಿಯಲ್ತೆ ?

೪

ಬಡತನದ ಕಿಚ್ಚಿನೊಳ್ ಬೆಂದ ಜನವೊಂದೆಡೆಗೆ
ಕಡು ಸಿರಿತನದ ಗರುವು ಬೇರೆಡೆಗೆ ! ಸಾಕು ವೈಷಮ್ಯ !
ಮೃಡ ಶರಣರೊಪ್ಪುವಪೊಲ್ ಸರ್ವೈಕಸಾಧನೆಯ ಸಾಧಿಸಲ್
ನಡೆಯೋಣ ಸಕಲರೊಂದಾಗಿ ಕಸ್ತೂರಿಯ ಕರುನಾಡಿನೊಳ್ !

—ನೋಟಗಿ ಮಲ್ಲಿಕಾರ್ಜುನ

# ಹೊಸತೆಲ್ಲ ಚಿಗುರಿ !

ಇಂದು ಏಕೀಕರಣ ನಮಗಿಲ್ಲ ಮರಣ;
ನಾಡಿಗಾಗಿಯೆ ಮುಡಿಪು ನಮ್ಮೆಲ್ಲ ಕರಣ !

ಹಂಪೆಯಾಳ್ದನ ಹರಕೆ
ನಮ್ಮ ಬಾಳಿಗೆ ರಕ್ಷೆ
ಅವನ ಕಣ್ಣರಿಕೆಯಲಿ
ಮೂಡಲಿದೆ ಹೊಸ ನಕ್ಷೆ

ಅಂದು ಕಟ್ಟಿದ ಕನಸು
ಇಂದು ನನಸಾಗಿಹುದು!
ಇಂದು ಕಟ್ಟುವ ಕನಸು
ಬಗೆಯೆದುರು ನಿಂತಿಹುದು ! –

ಅಲ್ಲಿ ಕಾಣುವುದೊಂದು
ಸೊಗದ ಸುಂದರ ರಾಜ್ಯ
ಸಮತೆ ಮಮತೆಯ ಆಳ್ಕೆ
ಯೊಳಗಿಲ್ಲಪೋ ವ್ಯಾಜ್ಯ !

ಈ ಸ್ವಪ್ನ ಸಾಧನದಿ
ರೋಮರೋಮವು ನಿಮಿರೆ
ಹಳತು ಸುಟ್ಟರೆ ಸುಡಲಿ
ಹೊಸತೆಲ್ಲವೂ ಚಿಗುರಿ !

—ವೀರಭದ್ರ ಶೆಟ್ಟರ

# ಇಂದು - ನಾಳೆ

೧

ಹೊನ್ನ ಪಂಜರದಿಂದ ಹೊರಬಂದ ಗಿಳಿಯಂತೆ
ನಮ್ಮ ನಾಡಿನ ಹಕ್ಕಿ ಹಾರುತಿಹುದು !
ಕನಸಿನೊಳು ಕಂಡ ದಿನವಿಂದು ನನಸಾಗಿರಲು
ಹೊಸ ಬಾಳ ನಾಂದಿಯನೆ ಹಾಡುತಿಹುದು !

೨

ನಾಡ ನಂದನದಲ್ಲಿ ಚೈತ್ರ ಅಡಿಯಿಟ್ಟಿರಲು
ಎಲ್ಲೆಲ್ಲು ಉತ್ಸಾಹ ಚಿಮ್ಮುತಿಹುದು !
ಶುಭದ ಬರವನು ಹಳಿವ ಮೂಢರನ್ನಣಕಿಸುತ
ನಾಡಿನೊಳು ಹೊಸಕಳೆಯು ಚಿಮ್ಮುತಿಹುದು !

೩

ಇಂದು ಮೊಳೆತಿಹ ಸಸಿಯು ನಾಳೆ ಬೆಳೆವುದೆ ನಿಯಮ !
ಅಂತೆ ಕೊಡುವುದು ಹೂವು-ಹಣ್ಣುಗಳನು !
ಇದರ ಬೇರಿಗೆ ಜೀವರಸವೆರೆದು ಪೋಷಿಸಲು
ಕೃಷಿಗೈದು ಸುರಿಸೋಣ ತನುರಸವನು !

—ಶಾಮ ಶಿರಗುಪ್ಪಿ

# ನಾಳಿನ ನಂಬಿಕೆ

*

ಕನ್ನಡದ ಸೋದರನೆ, ಖಿನ್ನನಾಗಿಹೆಯೇಕೆ
ಒಡೆದ ಕನ್ನಡಿಯಿಂದು ಒಂದಾಗಿರೆ ?
ಹೊಸ ಬಾಳ ವರವೀಯೆ ದರ್ಪಣದ ಎದುರಿನಲಿ
ನಾಡದೇವಿಯೆ ನಗುತ ನಿಂದಾಗಿರೆ ?

*

ತಾಯ ಸಿರಿಯಡಿಗಳಿಗೆ ಬಾಗಿ ಬಾಳುವೆಗಾಗಿ
ಸಿರಿ ಮತ್ತೆ ಸಂಪದವ ಬೇಡಿಕೊಳ್ಳು !
ನಾಳಿನಾ ಜೀವನದಿ ನವಯುಗದ ಚೇತನವ
ತುಂಬಿ ತೋರಿಸಲಿಂದೆ ದೀಕ್ಷೆ ಕೊಳ್ಳು !

*

ಹಿಂದಿನಾ ಕೊರತೆಗಳ ತುಂಬಿಕೊಳ್ಳುವ ಬಲವು
ನಮ್ಮ ತೋಳಿನಲಿಂದೆ ತುಂಬಿಕೊಂಡು
ತಾಯ ಕಣ್ಣರಿಕೆಯಲಿ ಹೊಸ ನಾಡು ಕಟ್ಟೋಣ
ನಾಳೆ ಬಹ ಒಳಿತನ್ನೆ ನಂಬಿಕೊಂಡು !

—ಬಿ. ಎಂ. ಗೌಡರ

# ಪ್ರತಿಜ್ಞೆ

೧

ಕಣ್ಗೆ ಕಟ್ಟಿರಲಿಂದು ನಾಡ ನವರೂಪ,
ಕನ್ನಡಮ್ಮನ ಗುಡಿಯ ಗರ್ಭದಲಿ ದೀಪ
ಹಚ್ಚಿ ಹಾಡುವೆವಾವು ಮಂಗಳದ ಹಾಡು
ನಮ್ಮ ಬಾಳುವೆಯಾಗೆ ಸೊಗದ ಬೀಡು !

೨

ನಾಡಿನೇಳಿಗೆಗಾಗಿ ದುಡಿದ ಹಿರಿಯರ ಸಾಲು
ಮುಂದಾಗೆ, ನಾವೆಲ್ಲ ಹಿಂದಿಂದೆ ಹುರುಪಿನೊಳು
ಕೂಡಿ ಬಂದಿಹೆವಮ್ಮ ನಿನ್ನ ಗುಡಿಗೆ;
ಬಾಗಿ ನಮಿಸುವೆವೆಲ್ಲ ನಿನ್ನ ಅಡಿಗೆ !

೩

ನಮ್ಮ ಹೃದಯದಿ ತುಂಬು ನವ್ಯಚೇತನವ
ಹೊಸ ಬೆಳಕು ಬೆಳಗುವೊಲು ನಮ್ಮ ಜೀವನವ !
ಬಂದ ಭಾಗ್ಯವನುಳಿಸಿಕೊಳುವ ಸನ್ಮತಿಯ
ನೀಡೆಮಗೆ, ಪಡೆವಂತೆ ಕೊನೆಗೆ ಸದ್ಗತಿಯ !

೪

ನಮ್ಮ ಹೃದಯದ ರಕ್ತದಾರತಿಯನೆತ್ತಿ
ನಾವು ಬೇಡುವುದೊಂದೆ : ಕೊಡು ನಮಗೆ ಶಕ್ತಿ !
ಸಿಂಗಾರಗೊಳಿಸುವೆವು ಈ ನಿನ್ನ ಗುಡಿಯ !
ಬಂಗಾರಗೊಳಿಸುವೆವು ಕನ್ನಡದ ನುಡಿಯ !!

—ಶಾಂತಿನಾಥ ಗುಂಡೆ

# ಐಕ್ಯಗಾನ

೧

ಕನ್ನಡದ ನೆಲ ಕುಲವು, ಕನ್ನಡದ ಛಲ ಬಲವು
ಒಂದಾಗಿ ಚೆಂದಾಗಿ ಬಾಳುವಾಸೆ
ಎಂದಿನಿಂದಲೊ ನಮ್ಮ ಮನಬನದಿ ಮುಗುಳಾಗಿ
ತಳೆದಿತ್ತು ಹೂವಾಗಿ ಅರಳುವಾಸೆ !

೨

ಮುಂದ ಮಾರುತನಿಂದು ಹೊಸತೊಸಗೆಯನೆ ತಂದು
ಕಿವಿಯೊಳುಸುರಲು ಕಣ್ಣು ತೆರೆದ ಮೊಗ್ಗೆ
ಸೌಗಂಧ ಸೂಸುತಿರೆ, ಭೃಂಗಾಳಿಗದುವೆ ಕರೆ-
ಯಾಯ್ತು ಮಧುಸಂಚಯಕೆ ಹೂಡೆ ಲಗ್ಗೆ !

೩

ಹಳೆ ಬಾಳಿನಾಪತ್ತು ಕರಗಿ, ಸುಖ-ಸಂಪತ್ತು
ಕನ್ನಡದ ಮಧುಕರನ ಕಣ್ಮನಸಿಗೆ
ತೃಪ್ತಿಯೀಯುತ ಸುಪ್ತ ಚೇತನಕೆ ಸಂಕ್ಷಿಪ್ತ
ರಸಲೋಕವನೆ ತೋರಿಸಿಹುದು ಬಗೆಗೆ !

೪

ಏನು ಅದ್ಭುತವಪ್ಪ ! ನಾಳೆ ನಾಡಿಗೆ ಬಪ್ಪ
ಧವಳಕೀರ್ತಿಯ ರವಿಯ ಕಿರಣತೇಜ !
ಸತ್ಪ್ರಭೆಯ ಸಂಚಾರವಾಗೆ ಶುಭ ಸಂಸ್ಕಾರ
ಪೂರ್ಣತೆಯ ಕದ ತೆರೆಯಲದುವೆ ಸಾಜ !

೫

ಈ ಹಿಂದೆ ಕಟ್ಟಿರದ ಕಟ್ಟಿಹುದ ಬಿಟ್ಟಿರದ
ನವಲೋಕಸೃಷ್ಟಿಯೆಡೆ ನಮ್ಮ ದೃಷ್ಟಿ
ಹರಿಯುವಾ ತೀರದಲಿ ಹರಿಯುತಿದೆ ಪೂರದಲಿ
ಭಾವನದಿ, ಸುರಿಯುತಿರೆ ಕಲ್ಪವೃಷ್ಟಿ !

೬

ಜಲದಿ ಬಲದುಂಬಿರಲು ಜಲಧಿಯೊಳಗಿಂಬಿರಲು
ಈ ಪಾತ್ರ ಆ ಗಾತ್ರ ಬೆಳೆಸಬಹುದು !
ಕನ್ನಡದ ಕಾವೇರಿ ಭಾರತದಿ ಬಾಯಾರಿ
ಸಾಯುತಿಹ ಸಾತ್ತ್ವಿಕತೆಯುಳಿಸಬಹುದು !

೭

ಕನ್ನಡಾಂಬೆಯ ಮನದಿ ಭಾರತಾಂಬೆಯ ಗುಣವ
ಕಂಡು ವಿಶ್ವದ ದಾರಿ ಹಿಡಿಯಬಹುದು !
ಒಂದೊಂದೆ ಅಡಿ ಮುಂದೆ ಇಡಲೆಂದೆ ನಾಡೊಂದೆ
ಆಗಿರಲು, ಹೊಸಕ್ಷಿತಿಜ ಮೂಡುತಿಹುದು !

೮

ಕನ್ನಡದ ಕುಲವೊಂದೆ, ಭಾರತದ ನೆಲವೊಂದೆ
ಜೀವಕೋಟಿಯ ಕೋಟಿಗೋಡೆಯೊಂದೆ !
ಒಂದೊಂದಕಿನ್ನೊಂದು ಛಂದವಾಗಿರಲಿಂದು
ವಿಶ್ವಶಾಂತಿಯ ಗೀತ ವಿಶ್ವಕೊಂದೆ !

೯

ಜಗದ ಜನಗಣಗಳಲಿ ನಮ್ಮ ಮನಮನಗಳಲಿ
ಜೀವರಸದೊಲು ಹರಿಯೆ ಐಕ್ಯಭಾವ,
' ಏಕೆ ಏಕೀಕರಣ ?– ನುಡಿಗೆ ಗಡಿಯಾಭರಣ ? '
ಎಂದವರ ಎದುರಿನೊಳೆ ನಾಡಿನುದಯ !

೧೦

ಕನ್ನಡದ ಸತ್ತ್ವವನು ಭಾರತದ ತತ್ತ್ವವನು
ಮೇಳವಿಸೆ ಈ ಮಧುರ ಮಿಲನಗಾನ,
ನಾಳೆ ಬಹ ಸಂತಾನಕೇಕತೆಯ ಸಂಪೂರ್ಣ
ಕಲ್ಪನೆಯ ಕೊಟ್ಟೀತು ಕಾಲಮಾನ !

—ಬಿ. ಎ. ಸನದಿ

# ‘ದುಂದುಭಿ’ ನೊಳಗಿಸಿದ ಬಳಗ

**ಶ್ರೀ. ಈಶ್ವರ ಸಣಕಲ್ಲ:** ತಮ್ಮ ‘ಕೋರಿಕೆ’ಯಿಂದ ಕನ್ನಡ ರಸಿಕರ ಕಣ್ಣು ಕೋರೈಸಿದ ಇವರು ಕನ್ನಡದ ಮೇಲ್ಪಂಕ್ತಿಯ ಕವಿಗಳಲ್ಲೊಬ್ಬರೆಂದು ಖ್ಯಾತಿವೆತ್ತಿದ್ದಾರೆ. ಬೆಳಗಾವಿಯ ಸಹಕಾರಿ ಶಾಖೆಯಲ್ಲೀಗ ಶೈಕ್ಷಣಿಕ ಮೇಲ್ವಿಚಾರಕರಾಗಿ ಕೆಲಸ ಮಾಡುತ್ತಿದ್ದಾರೆ. ‘ಸಂಸಾರ ಸಮರ’ ‘ಬ್ರಹ್ಮಚರ್ಯವೆ ಜೀವನ ವೀರ್ಯನಾಶವೇ ಮೃತ್ಯು’ ‘ಗ್ರಾಮೋದ್ಧಾರ’ ‘ಒಕ್ಕಲತನದ ಪ್ರದರ್ಶನದ ದಿಗ್ದರ್ಶನ’ ‘ನಾಲ್ವತವಾಡ ಶರಣರ ಚರಿತ್ರೆ’ ಇತ್ಯಾದಿ ಗದ್ಯ ಗ್ರಂಥಗಳನ್ನಿತ್ತ ಇವರಿಂದ ಇನ್ನೂ ಹೆಚ್ಚಿನ ಕಾವ್ಯಸೇವೆ ಸಲ್ಲಬೇಕಿದೆಯೆಂದು ಕಾವ್ಯಪ್ರೇಮಿಗಳು ನಿರೀಕ್ಷಿಸುವದು ಸ್ವಾಭಾವಿಕವಾಗಿದೆ.

**ಶ್ರೀ. ಕೃಷ್ಣಮೂರ್ತಿ ಪುರಾಣಿಕ:** ಗೋಕಾಕ ಮುನಸಿಪಲ್ ಹಾಯಸ್ಕೂಲಿನಲ್ಲಿ ಶಿಕ್ಷಕರಾಗಿದ್ದ ಇವರು ತಮ್ಮ ಸಾಹಿತ್ಯಕ್ಷೇತ್ರವನ್ನು ಬಲು ವಿಸ್ತಾರವಾಗಿ ನಿರ್ಮಿಸಿಕೊಂಡಿದ್ದಾರೆ. ‘ಬಾಳ ಕನಸು’ ಕವನ ಸಂಕಲನ, ಸೈರಂಧ್ರಿ, ಮುಗನಗೆಲವು, ದೊರೆಸಾನಿ, ರಾಧೇಯ ಇತ್ಯಾದಿ ಸರಳ ರಗಳೆಯ ನಾಟಕಗಳಲ್ಲದೆ, ಇಂದಿಗೆ ಇವರು ಹದಿನೇಳು ಕಾದಂಬರಿಗಳನ್ನು ಬರೆದು, ತಮ್ಮದೇ ಆದ ಸ್ಥಾನವನ್ನು ಸಂಪಾದಿಸಿಕೊಂಡಿದ್ದಾರೆ. ಗೋಕಾಕದ ‘ಸಾಹಿತ್ಯ ಸೇವಾಮಂದಿರ’ದ ಸೂತ್ರಧಾರಿಗಳೂ ಆಗಿದ್ದಾರೆ.

**ಶ್ರೀ. ಮಿರ್ಜಿ ಅಣ್ಣಾರಾಯರು:** ಕವಿಹೃದಯದ ಈ ಸಾಹಿತಿ ಗದ್ಯಕ್ಷೇತ್ರದಲ್ಲಿ ಉಳುಮೆ ಮಾಡಿದುದೇ ಹೆಚ್ಚು. ‘ನಿಸರ್ಗ’ –ಕಾದಂಬರಿಯಿಂದ ಹೆಸರಿಗೆ ಬಂದ ಶ್ರೀಯುತರು ಇಂದಿಗೆ ಎಂಟು ಧಾರ್ಮಿಕ ಗ್ರಂಥಗಳನ್ನು, ಎಂಟು ಕಾದಂಬರಿಗಳನ್ನಲ್ಲದೆ ಕೆಲವು ಕಥಾಸಂಕಲನಗಳನ್ನು ವಿಮರ್ಶಾ ಗ್ರಂಥಗಳನ್ನು, ಶೈಕ್ಷಣಿಕ ಮತ್ತು ಸಾಕ್ಷರತಾಪ್ರಯೋಜಕ ಕೃತಿಗಳನ್ನು ಪ್ರಕಟಿಸಿದ್ದು ‘ಶಾಂತಿ ಸೇವಾ ಸದನ’ ವೆಂಬ ಪ್ರಕಾಶನಸಂಸ್ಥೆಯನ್ನೂ ನಡೆಸುತ್ತಿದ್ದಾರೆ. ಸದ್ಯ: ಸೇಡಬಾಳದಲ್ಲಿ ಶಿಕ್ಷಕವೃತ್ತಿಯಲ್ಲಿದ್ದಾರೆ.

**ಶ್ರೀ. ವೀ. ಶಿ. ಕಂಬಿ:** ಕರ್ನಾಟಕ ವಿಶ್ವವಿದ್ಯಾಲಯದ ಪದವೀಧರರಾದ ಇವರೀಗ ಬೆಳಗಾವಿಯ ಕೆ. ಎಲ್. ಇ. ಸಂಸ್ಥೆಯ ಟ್ರೇನಿಂಗ ಕಾಲೇಜಿನಲ್ಲಿ ಅಧ್ಯಾಪಕರಾಗಿ ದುಡಿಯುತ್ತಿದ್ದಾರೆ. ಮೊದಲಿನಿಂದಲೂ ಕಾವ್ಯದ ಕಡೆ ಒಲವು. ಇವರ ಕವಿತೆಗಳು ಸುಕುಮಾರ, ಶಿವಾನುಭವ ಇತ್ಯಾದಿ ಮಾಸಿಕಗಳಲ್ಲಿ ಪ್ರಕಟವಾಗಿವೆ.

**ಶ್ರೀ. ಚೆನ್ನತನಯ:** ಶ್ರೀ. ಮುರಗೇಶ ಅಂಟಿನ ಅವರ ಕಾವ್ಯನಾಮ. ಇವರ ಕಥೆ ಕವನ ಲೇಖನಗಳು ಪ್ರಪಂಚ, ಜಯಕರ್ನಾಟಕ, ಕಂಕಣ ಇತ್ಯಾದಿ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇವರೀಗ ಬೆಳಗಾವಿಯ ಲಿಂಗರಾಜ ಕಾಲೇಜಿನಲ್ಲಿ ಇಂಟರಮೀಜಿಯೇಟದಲ್ಲಿ ಓದುತ್ತಿದ್ದಾರೆ.

**ಶ್ರೀ. ಎಚ್. ಸೂರ್ಯದೇವ :** ಬಯಲುಹೊಂಗಲದ ಈ ತರುಣ ಕವಿ ಜಯಂತಿ, ಜಯ ಕರ್ನಾಟಕ, ಚಿತ್ರಗುಪ್ತ ಪತ್ರಿಕೆಗಳ ಮುಖಾಂತರ ತಮ್ಮ ಪ್ರತಿಭೆಯನ್ನು ಪ್ರದರ್ಶಿಸಿದ್ದು ಸನಿಹದಲ್ಲಿಯೆ ಒಂದು ಕವನ ಸಂಕಲನವನ್ನೂ ಪ್ರಕಟಿಸಲಿದ್ದಾರೆ.

**ಶ್ರೀ. ಚಂದ್ರಶೇಖರ ಕಂಬಾರ:** ಹುಕ್ಕೇರಿ ತಾಲೂಕಿನ ಘೋಡ ಗೆರಿಯ ಬಡ ಕುಟುಂಬವೊಂದರಲ್ಲಿ ಜನಿಸಿದ ಈ ಕವಿ ಈಗ ಲಿಂಗರಾಜ ಕಾಲೇಜಿನಲ್ಲಿ ಪ್ರೀವಿಯಸ್ ವರ್ಗದಲ್ಲಿ ಓದುತ್ತಿದ್ದಾರೆ. ಚಿತ್ರಗುಪ್ತ ಜಯ ಕರ್ನಾಟಕ -- ಸಹಕಾರ ಇತ್ಯಾದಿ ಪತ್ರಿಕೆಗಳಲ್ಲಿ ಕವನಗಳು ಪ್ರಕಟವಾಗಿವೆ.

**ಶ್ರೀ. ಶಾಂತಿನಾಥ ಪಾಟೀಲ:** ಚಿಕ್ಕೋಡಿ ತಾಲೂಕಿನ ಸದಲಗಿ ಯವರು – ಈಗ ಲಿಂಗರಾಜ ಕಾಲೇಜಿನಲ್ಲಿ ಇಂಟರಮೀಜಿಯೇಟದಲ್ಲಿ ಓದು ತ್ತಿದ್ದಾರೆ. ಚಿತ್ರಗುಪ್ತ–ಪ್ರಪಂಚ–ಜಿನವಿಜಯ– ಸಂದೇಶ ಇತ್ಯಾದಿ ಪತ್ರಿಕೆಗ ಳಲ್ಲಿ ಕವನ – ಲೇಖನಗಳು ಪ್ರಕಟವಾಗಿವೆ.

**ಶ್ರೀ. ಬಾಳು ಬಿ. ಉಪಾಧ್ಯೆ:** ತಮ್ಮ 'ಬಾಳ ಬಂಡಿ' ಯಿಂದ ಬೆಳ ಕಿಗೆ ಬಂದಿರುವ ಶಮನೇವಾಡಿಯ ಈ ಕವಿ ತೀವ್ರಗತಿಯಿಂದ ಮುಂದುವರಿ ಯುತ್ತಿದ್ದಾರೆ. ಸ್ನೇಹ ಪ್ರಕಾಶನದ ಸಂಪಾದಕ ವರ್ಗದಲ್ಲಿರುವ ಶ್ರೀಯುತರು ಇಷ್ಟರಲ್ಲಿಯೇ ಇನ್ನೊಂದು ಕವನಸಂಕಲನವನ್ನು ಕೊಡಲಿದ್ದಾರೆ. ಹೊಟ್ಟೆ ಗಾಗಿ ಇವರು ಸೂಚಿಶಿಲ್ಪದ ಕೆಲಸ ಮಾಡಿದರೂ ಇವರ ಬಾಳಬಟ್ಟೆಯಲ್ಲಿ ಕವಿತೆಯೇ ಎದ್ದು ಕಾಣುವಂತಿದೆ.

**ಶ್ರೀ. ಬಿ. ಬಿ. ಹಿಂಗಮಿರೆ :** ಕೃಷ್ಣಾತೀರದ ರಾಜಾಪುರದವರಾದ ಇವರು ಈಗ ಲಿಂಗರಾಜ ಕಾಲೇಜಿನಲ್ಲಿ ಪದವಿಪರೀಕ್ಷೆಗಾಗಿ ಓದುತ್ತಿದ್ದಾರೆ. ಇವರ ಜನ್ಮಭಾಗದ ನೆಲ - ಜಲದ ವೈಪುಲ್ಯತೆ ಇವರ ಕಾವ್ಯಸೃಷ್ಟಿಯಲ್ಲೂ ಕಂಡು ಬರುತ್ತದೆ. ಸುತ್ತೂ ಕಡೆಯ ಕನ್ನಡ ಪತ್ರಿಕೆಗಳಲ್ಲೆಲ್ಲ ಇವರ ಕವಿತೆ ಗಳು ಪ್ರಕಟವಾಗಿದ್ದು ಒಂದು ಸಂಕಲನವೂ ಪ್ರಕಟವಾಗಲಿದೆ.

**ಶ್ರೀ. ಮ. ಬ. ಕೋರಿವಾಲಿ :** ಹುಕ್ಕೇರಿ ತಾಲೂಕಿನ ಯಮಕನ ಮರಡಿಯ ಪ್ರಾಥಮಿಕ ಶಾಲೆಯ ಪ್ರಧಾನ ಗುರುಗಳಾಗಿರುವ ಇವರು ತಮ್ಮ 'ಸಿಂಗಾರಸರ' ದಿಂದ ಈಗಾಗಲೇ ಕಾವ್ಯಕ್ಷೇತ್ರದಲ್ಲಿ ಬೆಳಕಿಗೆ ಬಂದಿದ್ದಾರೆ. ಕಾವ್ಯರಚನೆಯ ಜೊತೆಗೆ ಕವನಗಳನ್ನು ಹಾಡಿಯೂ ತೋರಿಸುತ್ತಾರೆ.

**ಶ್ರೀ. ದೇವೇಂದ್ರ ಕ. ಬಸ್ತವಾಡ :** ಬೈಲಹೊಂಗಲ ತಾಲೂಕಿನ ತಿಗಡೊಳ್ಳಿಯವರಾದ ಈ ಕವಿ ಈಗ ಅದೇ ತಾಲೂಕಿನ ತಿಗಡಿಯ ಪ್ರಾಥಮಿಕ ಶಾಲೆಯ ಪ್ರಧಾನ ಗುರುಗಳಾಗಿ ಕೆಲಸ ಮಾಡುತ್ತಿದ್ದಾರೆ. ಕನ್ನಡದಂತೆ ಹಿಂದಿಯಲ್ಲೂ ಬರೆಯುವ ರೂಢಿಯಿಟ್ಟಿದ್ದಾರೆ. 'ಪ್ರಾಥಮಿಕ ಶಿಕ್ಷಣ'- 'ಜಯಂತಿ'ಗಳಲ್ಲಿ ಇವರ ಕವನಗಳು ಪ್ರಕಟವಾಗಿವೆ.

**ಶ್ರೀ. ಬಾಳೇಶ ಲಕ್ಷೆಟ್ಟಿ :** ಗೋಕಾಕದವರು. ಬೆಳಗಾವಿಯಲ್ಲಿ 'ಉದಯ' ಹಸ್ತಪತ್ರಿಕೆಯನ್ನು ಹೊರಡಿಸುತ್ತಾರೆ. ಕವನ-ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಸದ್ಯ: ಇವರು ಲಿಂಗರಾಜ ಕಾಲೇಜಿನಲ್ಲಿ ಓದುತ್ತಿದ್ದು ಅಲ್ಲಿಯ ಕರ್ನಾಟಕ ಸಾಹಿತ್ಯಸಂಘದ ಕಾರ್ಯದರ್ಶಿಗಳೂ ಆಗಿದ್ದಾರೆ.

**ಶ್ರೀ. ಎಸ್. ವಿ. ಕಂಬಿ :** ಗೋಕಾಕ ತಾಲೂಕಿನ ಮದವಾಲದಲ್ಲಿ ಪ್ರಾಥಮಿಕ ಶಿಕ್ಷಕರಾಗಿರುವ ಇವರ ಕವನಗಳು ಶಿವಾನುಭವ ಸುಕುಮಾರ ಶರಣಸಾಹಿತ್ಯ ವೀರಮಾತೆ ಇತ್ಯಾದಿ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. 'ಸುಧಾ ಸಿಂಧು' ಎಂಬ ಕವನಸಂಗ್ರಹವೂ ಶೀಘ್ರದಲ್ಲಿಯೆ ಪ್ರಕಟವಾಗಲಿದೆ.

**ಶ್ರೀ. ಜಿ. ಆರ್. ಗೋಣಿ :** ಬೈಲಹೊಂಗಲ ತಾಲೂಕಿನ ಮುಗುಟಖಾನಹುಬ್ಬಳ್ಳಿಯವರು. ಇವರ 'ಕಿತ್ತೂರಕೀ ರಾಣಿ' ಎಂಬ ಹಿಂದಿ ಖಂಡಕಾವ್ಯವೂ, 'ಆದರ್ಶಸಮಾಜಸೇವಕ' ಎಂಬ ಕನ್ನಡ ಗದ್ಯಕೃತಿಯೂ ಪ್ರಕಟವಾಗಿವೆ. ಕವನಸಂಕಲನ - ಕಾದಂಬರಿಗಳು ಪ್ರಕಟವಾಗಲಿವೆ.

**ಶ್ರೀ. ಭುಜೇಂದ್ರ ಮಹಿಷವಾಡಿ :** 'ಮಾಯಾ ಮಂದಿರ' 'ಹಾಲು ಹಣ್ಣು' ಕವನಸಂಗ್ರಹಗಳಿಂದ ಕನ್ನಡದ ಪ್ರಸಿದ್ಧ ತರುಣ ಕವಿಗಳ ಸಾಲಿನಲ್ಲಿ ನಿಂತ ಇವರು ಇದೀಗ ಬೇಡಕಿಹಾಳ- ಶಮನೇವಾಡಿ ಹಾಯಸ್ಕೂಲಿನಲ್ಲಿ ಅಧ್ಯಾಪಕರಾಗಿ ಕೆಲಸ ಮಾಡುತ್ತಿದ್ದಾರೆ. ಇವರ ಇನ್ನೊಂದು ಸಂಕಲನ

- ಸೀತೆನೆ ಸುಲಿಗಾಯಿ - ಇಷ್ಟರಲ್ಲಿಯೇ ಪ್ರಕಟವಾಗಲಿದೆ. ಸ್ನೇಹ ಪ್ರಕಾಶನದ ಬಳಗದಲ್ಲಿರುವ ಶ್ರೀಯುತರು ಇದೀಗ ' ಸನ್ಮತಿ ' ಮಾಸಪತ್ರಿಕೆಯ ಸಂಪಾದಕರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ.

**ಶ್ರೀ. ಶಿವಲಿಂಗ ಪದ್ಮಣ್ಣವರ :** ಹುಕ್ಕೇರಿತಾಲೂಕಿನ ನಿಡುಸೋಸಿಯಲ್ಲಿ ಪ್ರಾ. ಶಿಕ್ಷಕರಾಗಿರುವ ಇವರ ಕವನಗಳು 'ಸುಕುಮಾರ' ಪತ್ರಿಕೆಯಲ್ಲಿ ಬೆಳಕು ಕಂಡಿವೆ. ಇಷ್ಟರಲ್ಲಿಯೇ ಕವನಸಂಗ್ರಹವೂ ಬರಲಿದೆ.

**ಶ್ರೀಮತಿ ಅಕ್ಕಾತಾಯಿ ತೇ. ಪಾಟೀಲ :** ಬೆಳಗಾವಿ ಜಿಲ್ಲೆಯ ಏಕಮೇವ ಸ್ತ್ರೀಪ್ರತಿನಿಧಿಯಾಗಿ 'ವಿಜಯದುಂದುಭಿ'ಯ ಬಳಗದಲ್ಲಿ ಸೇರಿಕೊಂಡಿರುವ ಇವರು ಅಥಣಿ ತಾಲೂಕಿನ ಐನಾಪುರದಲ್ಲಿರುತ್ತಾರೆ. ಅಲ್ಲಲ್ಲಿ ಕವಿತೆಗಳು ಪ್ರಕಟವಾಗಿವೆ. ಒಂದೆರಡು ಸಂಕಲನಗಳಲ್ಲೂ ಇವರ ಕವನಗಳಿಗೆ ಪ್ರಾತಿನಿಧ್ಯ ದೊರೆತಿವೆ. ಬರೆಯುವದರ ಜೊತೆಗೆ ಸರಾಗವಾಗಿ ಹಾಡಿತೋರಿಸಬಲ್ಲ ಗಮಕ ಕಲೆಗಾಗಿಯೂ ಹೆಸರು ಪಡೆದಿದ್ದಾರೆ.

**ಶ್ರೀ. ಈಶ್ವರ ಹಿರೇನಂದಿಹಳ್ಳಿ :** ಬಯಲುಹೊಂಗಲ ತಾಲೂಕಿನ ಹೀರೆನಂದಿಹಳ್ಳಿಯವರು. ಈಗ ಕೌಜಲಗಿ ಹಾಯಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದಾರೆ. ಕೆಲವು ಕವನಗಳು ಪತ್ರಿಕೆಗಳಲ್ಲಿ ಪ್ರಕಟವಾಗಿದ್ದು ಕವನ ಸಂಗ್ರಹವೂ ಪ್ರಕಟವಾಗಲಿದೆ.

**ಶ್ರೀ. ಸಿ. ಬಾ. ಕಾಡಣ್ಣವರ :** ಸವದತ್ತಿ ತಾಲೂಕಿನ ಕರೀಕಟ್ಟಿಯಲ್ಲಿಪರು ಸಾಮಾಜಿಕ ಕಾರ್ಯಕರ್ತರು. ಈಗಾಗಲೆ 'ಸ್ವಾತಂತ್ರದೇವ' ಎಂಬ ' ಗಂಡು ಗಾಡಿಯ ಕವನಸಂಗ್ರಹ'ವನ್ನು ಪ್ರಕಟಿಸಿದ್ದು ಸರಳರಗಳೆಯಲ್ಲಿ ಒಂದು ನಾಟಕವೂ ಪ್ರಕಟವಾಗಲಿದೆ. ಗ್ರಾಮಸುಧಾರಣೆಗಾಗಿ ಉತ್ಸಾಹದಿಂದ ಕೆಲಸ ಮಾಡುವ ಇವರ ಸಾಹಿತ್ಯದಲ್ಲೂ ಅದೇ ಒಲವು ಎದ್ದು ಕಾಣುತ್ತದೆ.

**ಶ್ರೀ. ನಾ. ಕೃ :** ಖಾನಾಪುರ ತಾಲೂಕಿನ ಗಂದಿಗವಾಡದವರಾದ ಶ್ರೀ. ನಾ. ಕೃ. ಪತ್ತಾರ ಅವರ ಕವನಗಳು ಜಯ ಕರ್ನಾಟಕ- ಚಿತ್ರಗುಪ್ತ ರೈತ ಇತ್ಯಾದಿ ಪತ್ರಿಕೆಗಳಲ್ಲಿ ಪ್ರಕಟವಾಗಿವೆ ಇವರ ಕವನಸಂಗ್ರಹ- ಕಾದಂಬರಿಗಳು ಪ್ರಕಟವಾಗಲಿವೆ

**ಶ್ರೀ. ಎಂ. ಭಾಲಚಂದ್ರ :** ಲಿಂಗರಾಜ ಕಾಲೇಜಿನಲ್ಲಿ ಪದವಿಪರೀಕ್ಷೆಗಾಗಿ ಓದುತ್ತಿರುವ ಇವರು ಶ್ರೀ. ಖೋತ ಅಪ್ಪಾಸಾಹೇಬರೊಡ್ಡಾಡಿ

‘ಬಾಳನನಸು’ ಎಂಬ ಕವನಸಂಗ್ರಹವೊಂದನ್ನು ಪ್ರಕಟಿಸಿದ್ದಾರೆ. ಗದ್ಯದಲ್ಲೂ ಗತಿಯಿದೆ. ಗೋಕಾಕದ ‘ಸಾಹಿತ್ಯಸೇವಾ ನಿಲಯು’ದ ಸಂಚಾಲಕರಲ್ಲೊಬ್ಬರು.

**ಶ್ರೀ. ಆರ್. ಬಾಳ :** ಹುಕ್ಕೇರಿಯಲ್ಲಿ ಹಾಯಸ್ಕೂಲಿನ ಶಿಕ್ಷಕರಾಗಿರುವ ಇವರು ಎಷ್ಟೋ ವಚನ ಕವನ ಕಥೆ–ಲೇಖನ ಇತ್ಯಾದಿಗಳನ್ನು ಜೀವನ-ಜಯಕರ್ನಾಟಕ–ಪ್ರಜಾವಾಣಿ–ಕರ್ನಾಟಕಬಂಧು–ಪತ್ರಿಕೆಗಳಲ್ಲಿ ಆರ್. ಬಿ. ಎಸ್. ಆರ್. – ಮಿಸ್ಟರ ಏ ಟ್ವೆಂಟಿ– ಇತ್ಯಾದಿ ಗುಪ್ತನಾಮಗಳಿಂದ ಪ್ರಕಟಿಸಿದ್ದಾರೆ. ಚಿತ್ರಕಲೆ– ಕೈಕೆಲಸಗಳಲ್ಲೂ ಉಳುಮೆ ಮಾಡಿದ್ದಾರೆ.

**ಶ್ರೀ. ಶ್ರೀಕಾಂತ ಶಮನೇವಾಡಿ :** ಶಮನೇವಾಡಿಯ ಸ್ನೇಹ ಪ್ರಕಾಶನದ ಬಳಗದ ಈ ಕವಿಗಳ ಕವನಗಳು ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದು ‘ಗುಲಾಬಿಗೊಂಚಲು’ ಶಿಶುಗೀತಸಂಗ್ರಹದಿಂದ ಜನಪ್ರಿಯರಾಗಿದ್ದಾರೆ. ಗಮಕ ಮತ್ತು ಅಭಿನಯಕಲೆಗಳಲ್ಲೂ ಗತಿಯಿದೆ. ಇಷ್ಟರಲ್ಲಿಯೇ ಇವರ ಭಾವಗೀತಗಳ ಸಂಗ್ರಹ ‘ಶ್ರೀಗಂಧ’ವೂ ಪ್ರಕಟವಾಲಿದೆ.

**ಶ್ರೀ. ಎಸ್.ಡಿ. ಇಂಚಲ :** ‘ತರಗಿಣಿ’ ‘ಬಣ್ಣದಚೆಂಡು’ ‘ಸ್ನೇಹಸೌರಭ’ಗಳ ಈ ಪ್ರಸಿದ್ಧ ಕವಿಗಳು– ಈಗ ಬೆಳಗಾವಿಯ ಜಿ. ಎ. ಹಾಯಸ್ಕೂಲಿನಲ್ಲಿ ಪ್ರಧಾನಾಧ್ಯಾಪಕರಾಗಿದ್ದಾರೆ. ಬೆಳಗಾವಿ ಜಿಲ್ಹೆಯ ಬಾಗೇವಾಡಿಯ ಕರಿನೆಲದ ಕೆಚ್ಚು ಇವರ ಮಾತಿನಲ್ಲೂ ಬರೆಹದಲ್ಲೂ ಎದ್ದು ಕಾಣುತ್ತದೆ. ಇದೀಗ ಇವರು ಉ. ಕರ್ನಾಟಕದ ಪ್ರಮುಖ ಕವಿಗಳ ಕಾವ್ಯಸಂಕಲನವನ್ನು ಸಂಪಾದಿಸಿ ತಮ್ಮದೇ ಆದ ಚೇತನ ಪ್ರಕಾಶನದಿಂದ ಪ್ರಕಟಿಸಿದ್ದಾರೆ. ಅದುವೆ ‘ಕರ್ನಾಟಕದರ್ಶನ.’

**ಶ್ರೀ. ವ್ಹಿ. ಕೆ. ಕರಡಿ :** ‘ಅಮರಜ್ಯೋತಿ’ ಲಾವಣಿಯನ್ನು ಪುಸ್ತಕರೂಪದಲ್ಲೂ ಗಾನದೋಸೆಯಲ್ಲೂ ಕನ್ನಡಿಗರೆದುರಿಟ್ಟು ಖ್ಯಾತಿವೆತ್ತ ಇವರು ಬೆಳಗಾವಿಯ ವೀ. ಸಾ. ಸಂ. ಪ್ರಕಾಶನ ಸಮಿತಿಯ ಸಂಚಾಲಕ ವರ್ಗದಲ್ಲಿದ್ದಾರೆ. ಇತ್ತೀಚೆ ‘ಕಾರಣಿಕಬಸವ’ ಎಂಬ ನಾಟಕವನ್ನು ಪ್ರಕಟಿಸಿದ್ದಾರೆ. ವಚನ ಸಾಹಿತ್ಯದ ವ್ಯಾಸಂಗ– ವಿಮರ್ಶೆಯಲ್ಲಿ ತುಂಬಾ ಆಸಕ್ತಿಯುಳ್ಳ ಶ್ರೀಯುತರು ಗಮಕಕಲೆಯಲ್ಲಿ ಎತ್ತಿದ ಕೈಯುಳ್ಳವರು. ಜಿ. ಎ. ಹಾಯಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದಾರೆ.

**ಶ್ರೀ. ಚಿಚ್ಚ ಕೋರ :** ಅಥಣಿಯ ಜೆ. ಎ. ಹಾಯಸ್ಕೂಲಿನ ಪ್ರಧಾ

ನಾಧ್ಯಾಪಕರಾದ ಶ್ರೀ. ಮನೋಹರರಾವ ದೇಶಪಾಂಡೆಯವರು ಕನ್ನಡ-ಹಿಂದಿ-ಮರಾಟಿ-ಸಂಸ್ಕೃತಗಳಲ್ಲೂ ಗ್ರಂಥರಚನೆ ಮಾಡಿದ ಹಿರಿಯ ಸಾಹಿತಿಗಳಾಗಿದ್ದು ಇಂಗ್ಲೀಷಿನಲ್ಲೂ ' Light of India 'ಎಂಬ ಕೃತಿಯನ್ನು ಪ್ರಕಟಿಸಿರುವದು, ಇವರ ವೈಶಿಷ್ಟ್ಯವಾಗಿದೆ. ಇಂದಿಗೆ ಇವರ ೧೨ ಗ್ರಂಥಗಳು ಪ್ರಕಟವಾಗಿದ್ದು ಬೇರೆ ಬೇರೆ ಭಾಷಾಕೃತಿಗಳೂ, ' ಭಾವ ಸುಮನಗಳು ' ಎಂಬ ವಚನಸಂಗ್ರಹವೂ New outlook in Educationಎಂಬ ಇಂಗ್ಲೀಷ ಕೃತಿಯೂ ಪ್ರಕಟವಾಗಲಿವೆ.

**ಶ್ರೀ. ಪಶುಪತಿ :** ' ಯಾತ್ರಿ ' ಕವನಸಂಗ್ರಹದಿಂದ ಹೆಸರು ಪಡೆದ ಇವರು ಈಗ ನವ್ಯಕಾವ್ಯರಚನೆಯಲ್ಲಿ ತೊಡಗಿದ್ದಾರೆ. ಸದ್ಯ ಬೆಳಗಾವಿಯ ಎಸ್. ಟಿ. ಕಾಲೇಜಿನಲ್ಲಿ ತರಬೇತಿ ಪಡೆಯುತ್ತಿದ್ದಾರೆ. ಈ ಮೊದಲೇ ' ಪ್ರಬಂಧಪರಿಚಯ ' ವೆಂಬ ಶೈಕ್ಷಣಿಕ ಕೃತಿಯೊಂದನ್ನೂ ಪ್ರಕಟಿಸಿದ್ದಾರೆ.

**ಶ್ರೀ . ಉಳುವೀಶ :** ಕಿತ್ತೂರ ನಾಡಿನ ಕೆಚ್ಚಿನ ಈ ಕವಿ ಈಗ ಕೌಜಲಗಿಯಲ್ಲಿ ಪ್ರಾಥಮಿಕ ಶಿಕ್ಷಕರಾಗಿದ್ದಾರೆ. ಜಯಂತಿ- ಜಯಕರ್ನಾಟಕ -ಸುಕುಮಾರ ಪತ್ರಿಕೆಗಳಲ್ಲಿ ಕವನಗಳು ಪ್ರಕಟವಾಗಿವೆ ಸಂಗೀತ- ಅಭಿನಯಗಳಲ್ಲಿಯೂ ಗತಿಯಿದೆ.

**ಶ್ರೀ. ಪರ್ವತರಾಜ ಪಾಟೀಲ** : ಬಯಲುಹೊಂಗಲದ ಈ ಕವಿಗಳು ಈಗ ಎಸ್. ಟಿ. ಕಾಲೇಜಿನಲ್ಲಿ ತರಬೇತಿ ಪಡೆಯುತ್ತಿದ್ದಾರೆ. ಜಯಕರ್ನಾಟಕ ಚಿತ್ರಗುಪ್ತ ಇತ್ಯಾದಿ ಪತ್ರಿಕೆಗಳಲ್ಲಿ ಇವರ ಭಾವಗೀತಗಳೂ ನವ್ಯ ಕವನಗಳೂ ಪ್ರಕಟವಾಗಿದ್ದು ಇಷ್ಟರಲ್ಲಿಯೇ ' ಭಾವಸುಂದರಿ ' ಎಂಬ ಕವನ ಸಂಗ್ರಹವೂ ಪ್ರಕಟವಾಗಲಿದೆ.

**ಶ್ರೀ. ದೇವೇಂದ್ರಕುಮಾರ ಪಾಟೀಲ** : ಬೆಳಗಾವಿ ತಾಲೂಕಿನ ಕುಡಚಿಯವರಾದ ಈ ಕವಿಗಳ ' ಮಾಯೆ ' ಎಂಬ ಕವನಸಂಗ್ರಹವಲ್ಲದೆ 'ರತ್ನ ಪರೀಕ್ಷೆ ''ಸಚಿತ್ರ ಜೈನ ಪಾಠಮಾಲೆ' ಎಂಬ ಅನುವಾದಿತ ಕೃತಿಗಳೂಬಂದಿವೆ-

**ಶ್ರೀ. ಪ್ರಕಾಶಲಿಂಗ ನಿಲುಗಲ್ಲ** : ಬೆಳಗಾವಿಯ ಎಸ್. ಟಿ. ಕಾಲೇಜಿನಲ್ಲಿ ತರಬೇತಿ ಪಡೆಯುತ್ತಿರುವ ಇವರು ಕೆಲವು ನಾಟಕಗಳನ್ನು -- ಕವನಗಳನ್ನೂ ಬರೆದಿದ್ದಾರೆ .ಈಗೀಗ ಪತ್ರಿಕೆಗಳ ಮೂಲಕ ಬೆಳಕಿಗೆ ಬಂದಿದ್ದಾರೆ.

**ಶ್ರೀ. ಖೋತ ಅಪ್ಪಾಸಾಹೇಬ** : ಚಿಕ್ಕೋಡಿ ತಾಲೂಕಿನ ಶಮನೆವಾಡಿಯ ಈ ಕವಿಗಳು ಗೋಕಾಕದ ಸಾಹಿತ್ಯ ಸೇವಾ ನಿಲಯದಿಂದ ' ಬಾಳ

ನನಸು' ಎಂಬ ಕವನಸಂಗ್ರಹವೊಂದನ್ನು ಕನ್ನಡಿಗರೆದುರಿಟ್ಟಿದ್ದಾರೆ. ಲಿಂಗ ರಾಜ ಕಾಲೇಜಿನಲ್ಲಿ ಪದವಿಪರೀಕ್ಷೆಗಾಗಿ ಓದುತ್ತಿದ್ದು 'ಶಶಿ' ಎಂಬ ಇನ್ನೊಂದು ಸಂಗ್ರಹವನ್ನು ಪ್ರಕಟಿಸಲಿದ್ದಾರೆ.

**ಶ್ರೀ ಬಸವರಾಜ ಮೂಗಿ:** ರಾಮದುರ್ಗದ ಸ್ಟೇಟ ಹಾಯಸ್ಕೂಲಿನಲ್ಲಿ ಶಿಕ್ಷಕರಾಗಿದ್ದ ಇವರೀಗ ಎಸ್. ಟಿ. ಕಾಲೇಜಿನಲ್ಲಿ ತರಬೇತಿ ಪಡೆಯುತ್ತಿದ್ದಾರೆ ಅನೇಕ ಕಥೆ-ಕವನ ಹರಟೆಗಳನ್ನು ಬರೆದಿದ್ದಾರೆ.

**ಶ್ರೀ. ಮಲ್ಲಿಕಾರ್ಜುನ ನೋಟಗಿ :** ಈಗಾಗಲೇ ಲಿಂಗವಿಲಾಸ, ಅಂತಃಪುರಗೀತೆ, ಆತ್ಮಸ್ವಾತಂತ್ರ್ಯ, ಧರ್ಮರಹಸ್ಯ, ಶಿವಾನುಭವದರ್ಪಣ ದಿವ್ಯವಾಣಿ ಇತ್ಯಾದಿ ಕೃತಿಗಳಿಂದ ಬೆಳಕಿಗೆ ಬಂದ ಇವರು ಅಥಣಿಯಲ್ಲಿ ಸ್ವತಂತ್ರ ವ್ಯಾಪಾರ ಮಾಡುತ್ತಾರೆ.

**ಶ್ರೀ. ವೀರಭದ್ರ ಶೆಟ್ಟರ:** ಮಾತು ಮಾತಿಗೆ ನಕ್ಕು ನಗಿಸುವ ಈ ಕವಿ ಈಗ ಎಸ್. ಟಿ. ಕಾಲೇಜಿನ ತರಬೇತಿಯಲ್ಲಿದ್ದಾರೆ. ಹಲವಾರು ಪತ್ರಿಕೆಗಳಲ್ಲಿ ಪ್ರಕಟವಾದ ಇವರ ಕವನಗಳು ಸಂಗ್ರಹರೂಪದಲ್ಲಿ ಪ್ರಕಟವಾಗಲಿವೆ.

**ಶ್ರೀ ಶಾಮ ಶಿರಗುಪ್ಪಿ :** ಲಿಂಗರಾಜ ಕಾಲೇಜಿನಲ್ಲಿ ಇಂಟರಮಿಜಿಯೆಟದಲ್ಲಿ ಓದುತ್ತಿದ್ದ, ಶಮನೆವಾಡಿಯ ಈ ಕವಿಯ ಕವನಗಳು ಜಿನವಿಜಯ– ಸೇವಾ– ಸಂದೇಶ ಇತ್ಯಾದಿ ಪತ್ರಿಕೆಗಳಲ್ಲಿ ಪ್ರಕಟವಾಗಿವೆ

**ಶ್ರೀ. ಬಿ. ಎಂ. ಗೌಡರ :** ಸಂಕೇಶ್ವರದ ಎಸ್. ಡಿ. ಹಾಯಸ್ಕೂಲಿನಲ್ಲಿ ಎಸ್. ಎಸ್. ಸಿ. ಗಾಗಿ ಓದುತ್ತಿರುವ ಇವರು ಕಾವ್ಯ ರಚನೆಯ ಕಡೆಗೆ ಈಗ ತಾನೆ ಮನಸ್ಸು ಹಾಕಿದ್ದಾರೆ. ನಾಳೆ ಬೆಳೆಯಬಹುದಾದ ಕಲ್ಪನೆಯ ಚಿಗುರು ಅವರ ಕವಿತೆಯಲ್ಲಿದೆ.

**ಶ್ರೀ. ಶಾಂತಿನಾಥ ಪಾ. ಗುಂಡೆ :** ಚಿಕ್ಕೋಡಿ ತಾಲೂಕಿನ ಜೋರಗಾಂವಿಯವರಾದ ಇವರೀಗ ಲಿಂಗರಾಜ ಕಾಲೇಜಿನಲ್ಲಿ ಇಂಟರಮೀಜಿಯೆಟದಲ್ಲಿ ಓದುತ್ತಿದ್ದಾರೆ. ಜಿನವಿಜಯ – ಜೀವನಜ್ಯೋತಿ – ಸೇವಾ ಪತ್ರಿಕೆಗಳಲ್ಲಿ ಕವನಗಳು ಪ್ರಕಟವಾಗಿವೆ.

**ಶ್ರೀ. ಬಿ. ಎ. ಸನದಿ :** ಬೆಳಗಾವಿ ತಾಲೂಕಿನ ಸಿಂದೊಳ್ಳಿಯವರಾದ ಇವರು ಈಗ ಎಸ್. ಟಿ. ಕಾಲೇಜಿನಲ್ಲಿ ತರಬೇತಿ ಪಡೆಯುತ್ತಿದ್ದಾರೆ. ಈಗಾಗಲೇ ಕೆಲ ಶಿಶುಗೀತಸಂಗ್ರಹಗಳನ್ನು ಪ್ರಕಟಿಸಿರುವ ಇವರ 'ನೆಲಸಂಪಿಗೆ' ಮತ್ತು 'ಆಶಾಕಿರಣ' ಎಂಬೆರಡು ಕವನಸಂಗ್ರಹಗಳು ಪ್ರಕಟವಾಗಲಿವೆ.

# ಶುದ್ಧಿಪತ್ರ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೨ | ೭ | ಚ್ಯುತಿ–ರಹಿತ | ಚ್ಯುತಿರಹಿತ |
| ೩ | ೧೫ | ಒಂದಾಗಿದಿರಬಹುದೆ? | ಒಂದಾಗದಿರಬಹುದೆ |
| ೫ | ೧೯ | ಜನಸಿದಾ | ಜನಿಸಿದಾ |
| ೯ | ೨ | ಬುವಿಗಳಿವ | ಬುವಿಗಿಳಿವ |
| ೧೦ | ೧ | ಕಿರಿಯರಿರ, | ವೀರರಿರ |
| ೧೦ | ೧೩ | ಬೆಳಗುತಿರೆ | ಬೆಳಗುತಿದೆ |
| ೧೭ | ೩ | ಕಿರ್ತಿಯು | ಕೀರ್ತಿಯು |
| ೧೭ | ೧೫ | ಬೆಳಕಿನಲ್ಲಿದೆ | ಬೆಳಕಿನಲ್ಲಿದೆ |
| ೧೯ | ೧೧ | ಕ್ರೋಧನವಳಳಿದು | ಕ್ರೋಧವನಳಿದು |
| ೨೦ | ೧ | ಮಳ್ಕಳೆ | ಮಕ್ಕಳೆ |
| ೨೩ | ೮ | ಎದೆಂದು | ಎಂದೆಂದು |
| ೨೭ | ೧೬ | ಸೆಳೆಯುವರು ! | ಸೆಳೆವರು |
| ೩೪ | ೧೪ | ಕಣ್ಣೆರೆದು | ಕಣ್ದೆರೆದು |
| ೪೩ | ೧೧ | ಕೀಟಗೆಳೆನಿತೊ | ಕೀಟಗಳೆನಿತೊ |
| ೪೫ | ೩ | ತಾವೆನುವೂಲು | ತಾವೆನುವೊಲು |
| ೪೫ | ೪ | ರಣಕಳಿದರೆ | ರಣಕಿಳಿದರೆ |
| ೪೭ | ೧೬ | ಬೇಗೆಯುನೆರೆದಿಹರು | ಬೇಗೆಯನೊರೆದಿಹರು |
| ೪೯ | ೨೦ | –ಶ್ವಾತ್ಮಗೆ ಆರ– | ವಿಶ್ವಾತ್ಮಗೆ ಆರತಿ |
| ೬೦ | ೭ | ಈ ೌನ? | ಈ ಮೌನ? |
| ೬೨ | ೪ | ಸಿಂದು | ಸಿಂಧು |
| ೬೫ | ೧೪ | ಯೊಳಗಿಲ್ಲಪೊ | ಯೊಳಗಿಲ್ಲವೊ |

ಚೇತನ ಪ್ರಕಾಶನದ ಪ್ರಥಮ ಪ್ರಕಟನೆ

# "ಕರ್ನಾಟಕ ದರ್ಶನ"

(ಕವನಸಂಕಲನ)

ಸಂಪಾದಕರು: ಎಸ್. ಡಿ. ಇಂಚಲ

**೧೯೫೬, ನವೆಂಬರ್ ೧ ....**

ಕನ್ನಡ ನಾಡ ಇತಿಹಾಸದಲ್ಲಿ ಇದೊಂದು ಸಂಕ್ರಾಂತಿಯ ದಿನ. ಒಂದು ಸಾವಿರ ವರುಷ ಭಿನ್ನ ಭಿನ್ನ ಆಡಳಿತಗಳ ಕೆಳಗೆ ಬಾಳಿದ ಕನ್ನಡಿಗರು ಅಂದು ಮತ್ತೆ ಒಂದುಗೂಡುತ್ತಾರೆ; ಪ್ರಜಾಪ್ರಭುತ್ವದ ನೂತನ ಮಾರ್ಗದಲ್ಲಿ ಕನ್ನಡ ರಾಜ್ಯವನ್ನು ಭಾರತ ಜಾನಪದದ ಅಂಗವಾಗಿ ನಿರ್ಮಿಸಿಕೊಳ್ಳುತ್ತಾರೆ.

ಈ ಸುವರ್ಣಕ್ರಾಂತಿಯ ಅರುಣೋದಯವನ್ನು ಸ್ವಾಗತಿಸಿದೆ-ಈ ಪುಟಗಳಲ್ಲಿಯ ಹಕ್ಕಿ-ಹಿಂಡು. ಉತ್ತರ ಕರ್ನಾಟಕದ ಅನೇಕ ಕವಿಗಳ ಕವನಗಳನ್ನು ಕವಿಮಿತ್ರರಾದ ಶ್ರೀ. ಎಸ್. ಡಿ. ಇಂಚಲರವರು ಸಂಗ್ರಹಿಸಿ ಕನ್ನಡ ತಾಯದೇಗುಲದಲ್ಲಿ ಈ ಪುಟ್ಟ ನಂದಾದೀಪವನ್ನು ಹಚ್ಚಿದ್ದಾರೆ. ಅನೇಕ ಕುಡಿಗಳುಳ್ಳ ಈ ನಂದಾದೀಪ ಕನ್ನಡ ತಾಯಿಯ ಅನುಪಮ ಕಾಂತಿಯೆಡೆಗೆ ಜನಮನವನ್ನು ಸೆಳೆಯುವದರಲ್ಲಿ ಸಂಶಯವಿಲ್ಲ.

— ವಿ. ಕೃ. ಗೋಕಾಕ (ಮುನ್ನುಡಿಯಿಂದ)

## ಇತರ ಕೃತಿಗಳು:

| | | | |
|---|---|---|---|
| ತರಂಗಿಣಿ .... | .... (ಕವನಸಂಗ್ರಹ) | .... | ಎಸ್. ಡಿ. ಇಂಚಲ |
| ಸ್ನೇಹಸೌರಭ .... | .... ( ,, ) | .... | ,, |
| ಬಣ್ಣದ ಚೆಂಡು | .... (ಶಿಶುಗೀತಗಳು) | .... | ,, |
| ಗುಲಾಬಿಗೊಂಚಲು .... | ( ,, ) | .... | ಬಿ. ಎ. ಸನದಿ |
| ಗೃಹಪಂಚಮಿ | .... ( ,, ) | .... | ,, |
| ಜಿಲೇಬಿರ್ಝುಣ್‌ರ್ಝುಣ್ | (ಕಥನಕವನಗಳು) | .... | ,, |

## ಬರಲಿವೆ

| | | | |
|---|---|---|---|
| ಜಾನಪದ ಸಾಹಿತ್ಯದಲ್ಲಿ ಜೀವನಸೌಂದರ್ಯ | (ರಸವಿಮರ್ಶೆ) | .... | ಎಸ್. ಡಿ. ಇಂಚಲ |
| ಪ್ರಬಂಧ ಸಂಚಯ .... | (ಲೇಖನಗಳು) | .... | ,, |
| ಶಾರದಾ–ವಿಹಾರ .... | (ಪತ್ರಗಳು) | .... | ಬಿ. ಎ. ಸನದಿ |